CPMG / KA / BG-GPO/13/2003-2005

ಸುವರ್ಣ ಕರ್ನಾಟಕ - 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ಸಂಪುಟ ೧೪೦ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೮, ೨೦೦೫ (ಭಾದ್ರಪದ ೧೭, ಶಕ ವರ್ಷ ೧೯೨೭) | ಸಂಚಿಕೆ ೩೬

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

ಕಂದಾಯ ಸಚಿವಾಲಯ

**ವಿಷಯ:** ಸೆಂಟ್ರಲ್ ಎಜುಕೇಷನ್ ಸೊಸೈಟಿ, ಊರ್ಡಿಗೆರೆ, ತುಮಕೂರು ತಾಲ್ಲೂಕು ಈ ಸಂಸ್ಥೆಗೆ ನೇಮಕ ಮಾಡಿರುವ ಆಡಳಿತಾಧಿಕಾರಿಯವರ ಅವಧಿಯನ್ನು ವಿಸ್ತರಿಸಿ ಆದೇಶಿಸುವ ಕುರಿತು.

**ಓದಲಾಗಿದೆ:** (1) ಸರ್ಕಾರದ ಆದೇಶ ಸಂಖ್ಯೆ:ಕಂಇ 37 ಇಎಫ್ಎಸ್ 94, ದಿನಾಂಕ:17-09-1996.

(2) ಸರ್ಕಾರದ ಆದೇಶ ಸಂಖ್ಯೆ:ಕಂಇ 42 ಮುನೊಸೊ 2003, ದಿನಾಂಕ:18-12-2004.

(3) ಆಡಳಿತಾಧಿಕಾರಿಗಳು, ಸೆಂಟ್ರಲ್ ಎಜುಕೇಷನ್ ಸೊಸೈಟಿ (ರಿ), ಊರ್ಡಿಗೆರೆ ಇವರ ಪತ್ರ ಸಂಖ್ಯೆ:ಎ.ಸಿ.ಪಿ.ಎಅ/31/96-97/01/05-04, ದಿನಾಂಕ:08-04-2005.

**ಪ್ರಸ್ತಾವನೆ:**

ಮೇಲೆ ಓದಲಾದ-1 ರ ಸರ್ಕಾರಿ ಆದೇಶದಲ್ಲಿ ಸೆಂಟ್ರಲ್ ಎಜುಕೇಷನ್ ಸೊಸೈಟಿ, ಊರ್ಡಿಗೆರೆ, ತುಮಕೂರು ತಾಲ್ಲೂಕು, ಈ ಸಂಸ್ಥೆಗೆ ಸಾರ್ವಜನಿಕ ಹಿತದೃಷ್ಟಿಯಿಂದ ಉಪ ವಿಭಾಗಾಧಿಕಾರಿಗಳು, ತುಮಕೂರು ಉಪ ವಿಭಾಗ ಇವರನ್ನು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ-27 ಎ ರನ್ವಯ 6 ತಿಂಗಳ ಅವಧಿಗೆ ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ನಂತರ ಕಾಲಕಾಲಕ್ಕೆ ಆಡಳಿತಾಧಿಕಾರಿಯವರ ಅವಧಿಯನ್ನು ವಿಸ್ತರಿಸಿಕೊಂಡು ಬರಲಾಗುತ್ತಿದ್ದು, ಮೇಲೆ -2 ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ವಿಸ್ತರಿಸಲಾಗಿದ್ದ ಆಡಳಿತಾಧಿಕಾರಿಯವರ ಅವಧಿಯು ದಿನಾಂಕ: 17-03-2005 ಕ್ಕೆ ಮುಕ್ತಾಯಗೊಂಡಿರುತ್ತದೆ.

ಮೇಲೆ ಓದಲಾದ-3ರ ಪತ್ರದಲ್ಲಿ ಆಡಳಿತಾಧಿಕಾರಿಯವರು ತುಮಕೂರು ಸಿವಿಲ್ ನ್ಯಾಯಾಲಯದಲ್ಲಿ ಹೂಡಲಾಗಿರುವ ದಾವೆಯು ಇನ್ನು ಇತ್ಯರ್ಥವಾಗಿರುವುದಿಲ್ಲ. ಸಂಸ್ಥೆಯ ಸದಸ್ಯರುಗಳು ಸಂಸ್ಥೆಯ ಚಟುವಟಿಕೆಗಳ ಬಗ್ಗೆ ಆಸಕ್ತಿವಹಿಸಿರುವುದಿಲ್ಲವಾದ್ದರಿಂದ ಸಂಸ್ಥೆಗೆ ಚುನಾವಣೆ ನಡೆಸಲು ಸಾಧ್ಯವಾಗಿರುವುದಿಲ್ಲ. ಸಂಸ್ಥೆಯ, ವಿದ್ಯಾರ್ಥಿಗಳ, ಶಿಕ್ಷಕರ ಹಾಗೂ ಸಾರ್ವಜನಿಕರ ಹಿತದೃಷ್ಟಿಯಿಂದ ದಿನಾಂಕ: 18-03-2005 ರಿಂದ ಮುಂದಿನ 6 ತಿಂಗಳ ಅವಧಿಗೆ ಆಡಳಿತಾಧಿಕಾರಿಯವರ ಅವಧಿಯನ್ನು ವಿಸ್ತರಿಸುವಂತೆ ಕೋರಿರುತ್ತಾರೆ.

ಆಡಳಿತಾಧಿಕಾರಿಯವರ ವರದಿಯನ್ನು ಸರ್ಕಾರವು ಪರಿಶೀಲಿಸಿದ್ದು, ಸದರಿಯವರ ವರದಿಯನ್ವಯ ದಿನಾಂಕ: 18-03-2005 ರಿಂದ 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸಲು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 42 ಮುನೊಸೊ 2003, ಬೆಂಗಳೂರು, ದಿನಾಂಕ: 2ನೇ ಆಗಸ್ಟ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ಕಲಂ 27ಎ ಪ್ರಕಾರ ಸೆಂಟ್ರಲ್ ಎಜುಕೇಷನ್ ಸೊಸೈಟಿ, ಊರ್ಡಿಗೆರೆ, ತುಮಕೂರು ತಾಲ್ಲೂಕು, ಈ ಸಂಸ್ಥೆಗೆ ನೇಮಿಸಲಾಗಿದ್ದ ಆಡಳಿತಾಧಿಕಾರಿಯವರ ಅವಧಿಯನ್ನು ಸಾರ್ವಜನಿಕ ಹಿತದೃಷ್ಟಿಯಿಂದ ದಿನಾಂಕ: 18-03-2005 ರಿಂದ 6 ತಿಂಗಳ ಅವಧಿಗೆ

ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಿದೆ.

ಆಡಳಿತಾಧಿಕಾರಿಯವರು ಈ ವಿಸ್ತರಿಸಿದ ಅವಧಿಯೊಳಗೆ ಪ್ರಾಮಾಣಿಕ ಪ್ರಯತ್ನ ಮಾಡಿ ಸಂಘಕ್ಕೆ ಚುನಾವಣೆ ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1109

**ಎಂ.ಪಿ. ಮಂಜುನಾಥ್**

ಪೀಠಾಧಿಕಾರಿ,

ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ)

**ವಿಷಯ:** ಚನ್ನಪಟ್ಟಣದ ಉಪ ನೋಂದಣಿ ಕಛೇರಿಯನ್ನು ಸ್ಥಳಾಂತರಿಸಲು ಮತ್ತು ಕಟ್ಟಡದ ಬಾಡಿಗೆಯನ್ನು ನಿಗದಿಪಡಿಸುವ ಬಗ್ಗೆ ಆದೇಶ.

**ಓದಲಾಗಿದೆ:** ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ರವರ ಪತ್ರ ಸಂಖ್ಯೆ:ಬಿಎಲ್‌ಡಿ-2/05-06, ದಿನಾಂಕ:20-07-2005 ಮತ್ತು 27-07-2005.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ರವರು ಪ್ರಸ್ತಾವನೆ ಸಲ್ಲಿಸಿ ಚನ್ನಪಟ್ಟಣ ಉಪ ನೋಂದಣಿ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಕಟ್ಟಡದ ವಿಸ್ತೀರ್ಣವು 600 ಚದುರ ಅಡಿ ಇದ್ದು, ಸರ್ಕಾರಿ ಕಟ್ಟಡದಲ್ಲಿರುತ್ತದೆ. ಹಾಲೀ ಕಟ್ಟಡದಲ್ಲಿ ಸ್ಥಳಾವಕಾಶ ಕಡಿಮೆ ಇದ್ದು, ಕಛೇರಿಯ ದೈನಂದಿನ ಕೆಲಸಕಾರ್ಯಗಳಿಗೆ ಹಾಗೂ ನೋಂದಣಿಗಾಗಿ ಬರುವ ಸಾರ್ವಜನಿಕರಿಗೆ ಕುಳಿತುಕೊಳ್ಳಲು ಸ್ಥಳಾವಕಾಶವಿರುವುದಿಲ್ಲ. ಅಲ್ಲದೆ ಕಛೇರಿ ಕಟ್ಟಡದ ಮೇಲ್ಛಾವಣಿಯ ಸ್ವಲ್ಪಭಾಗ ಬಿದ್ದು ಹೋಗಿದ್ದು, ಮಳೆ ಬಂದಾಗ ದಾಖಲೆಗಳನ್ನು ಸಂರಕ್ಷಿಸಿಡುವುದು ಕಷ್ಟಕರವಾಗಿರುತ್ತದೆ. ಆದ್ದರಿಂದ ಸದರಿ ಕಛೇರಿಯನ್ನು ಶ್ರೀಮತಿ ಶಶಿಕಲಾ ಕೋಂ ರಾಮೇಗೌಡ ಇವರ ಮಾಲೀಕತ್ವದ ಕಟ್ಟಡದ ಸಂಖ್ಯೆ:2167/234, ಮೊದಲನೇ ಮಹಡಿ, 5ನೇ ಅಡ್ಡರಸ್ತೆ, ಬಿ.ಎಂ. ರಸ್ತೆ, ಚನ್ನಪಟ್ಟಣ, ಈ ಕಟ್ಟಡವು 3216 ಚದುರ ಅಡಿಗಳ ವಿಸ್ತೀರ್ಣ ಹೊಂದಿದ್ದು ಸದರಿ ಕಟ್ಟಡಕ್ಕೆ ಸ್ಥಳಾಂತರಿಸಲು ಮತ್ತು ಲೋಕೋಪಯೋಗಿ ಇಲಾಖೆಯು ನಿಗಧಿಪಡಿಸಿರುವ ಚದುರ ಅಡಿಗೆ ರೂ.7.86/-ರಂತೆ 3216 ಚದುರ ಅಡಿಗೆ ಒಟ್ಟು ಮಾಸಿಕ ಬಾಡಿಗೆಯನ್ನು ರೂ. 25,307-00 ಗಳಿಗೆ ನಿಗಧಿಪಡಿಸಿ ಅನುಮತಿ ನೀಡುವಂತೆ ಕೋರಿರುತ್ತಾರೆ.

ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ರವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 31 ಮುನೊಸ 2005, ಬೆಂಗಳೂರು, ದಿನಾಂಕ: 06ನೇ ಆಗಸ್ಟ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಚನ್ನಪಟ್ಟಣದ ಉಪ ನೋಂದಣಿ ಕಛೇರಿಯನ್ನು ಹಾಲಿ ಕಾರ್ಯನಿರ್ವಹಿಸುತ್ತಿರುವ ಸರ್ಕಾರಿ ಕಟ್ಟಡದಿಂದ ಶ್ರೀಮತಿ ಶಶಿಕಲಾ ಕೋಂ ರಾಮೇಗೌಡ ರವರ ಮಾಲೀಕತ್ವದ ಕಟ್ಟಡಕ್ಕೆ ವರ್ಗಾಯಿಸಲು ಹಾಗೂ ಸದರಿ ಕಟ್ಟಡಕ್ಕೆ ತಿಂಗಳಿಗೆ ರೂ. 25,307-00 ಗಳ (ಇಪ್ಪತ್ತೈದು ಸಾವಿರದ ಮೂರು ನೂರ ಏಳು ರೂಪಾಯಿಗಳು ಮಾತ್ರ) ಬಾಡಿಗೆಯನ್ನು ನಿಗಧಿಪಡಿಸಿ ಆದೇಶಿಸಿದೆ.

ಈ ಕಟ್ಟಡಕ್ಕೆ ಸ್ಥಳಾಂತರಿಸುವ ಮೊದಲು ಕಟ್ಟಡದ ಮಾಲೀಕರಿಂದ ಕನಿಷ್ಟ 5 ವರ್ಷಗಳ ಅವಧಿಗೆ ಗುತ್ತಿಗೆ ಕರಾರು ಪತ್ರ ಪಡೆದು ನಂತರ ಸ್ಥಳಾಂತರಿಸಲು ಆಡಳಿತ ಇಲಾಖೆಗೆ ಆದೇಶಿಸಿದೆ.

ಈ ವೆಚ್ಚವನ್ನು 2005-06ನೇ ಸಾಲಿನ " ಲೆಕ್ಕ ಶೀರ್ಷಿಕೆ 2030-03-001-1-00-071" ರಡಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಆಇ 1 ಟಿಎಫ್‌ಪಿ 96, ದಿನಾಂಕ:10-07-1996 ರಲ್ಲಿ ಸರ್ಕಾರದ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಪಿ.ಆರ್. 1110

ಪೀಠಾಧಿಕಾರಿ,

ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ)

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಎನ್.ನಾಗರಾಜ್, ಮಾಜಿ ಸಿಪಿಸಿ 262, ದಾವಣಗೆರೆ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ, ಇವರ ಆದೇಶ ಸಂಖ್ಯೆ:ಸಿಬ್ಬಂದಿ-5/ಇವಿ/6/1999-2000 ಓಬಿ ಸಂ:447/2000-01.ದಿನಾಂಕ:12-01-2001.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ,ದಾವಣಗೆರೆ ಇವರ ಆದೇಶ ಸಂಖ್ಯೆ:ಅಪೀಲು/84/2000-02 ಓಬಿ ಸಂ:51/2000. ದಿನಾಂಕ:31-07-2001.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:01-03-2002.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/5/2002-03, ದಿನಾಂಕ:04-03-2003 21-12-2004 ಹಾಗೂ 15-03-2005.

**ಪ್ರಸ್ತಾವನೆ:**

ಶ್ರೀ ಎನ್.ನಾಗರಾಜ್ ಮಾಜಿ ಸಿಪಿಸಿ 262, ದಾವಣಗೆರೆ ಜಿಲ್ಲೆ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:** "ನೀವು ಹರಪನಹಳ್ಳಿ ಠಾಣೆಯಲ್ಲಿ ವಿಶೇಷ ಕರ್ತವ್ಯದಲ್ಲಿದ್ದಾಗ ನಿಮಗೆ ದಿನಾಂಕ:05-06-2000 ರಂದು ರಾತ್ರಿ, ಗಸ್ತಿನ ಕರ್ತವ್ಯಕ್ಕೆ ರಾತ್ರಿ 10-00 ಗಂಟೆ ಸಮಯಕ್ಕೆ ನೇಮಕ ಮಾಡಿದ್ದು ರೋಲ್ ಕಾಲ್ ಆದ ನಂತರ ನೀವು ಸಮವಸ್ತ್ರ ಬಿಚ್ಚಿ ಮಫ್ತಿಯಲ್ಲಿ ಪಾನ ಮತ್ತರಾಗಿ ತಿರುಗಾಡಿ ಕರ್ತವ್ಯದಲ್ಲಿ ನಿರ್ಲಕ್ಷತನ ತೋರಿದ್ದೀರಿ."

2. "ದಿನಾಂಕ:05-06-2000 ರಂದು ರಾತ್ರಿ 10-30 ಗಂಟೆ ಸಮಯದಲ್ಲಿ ನೀವು ನಿಮ್ಮ ಸಹಪಾಠಿ ಸಿಪಿಸಿ-592 ಅಣ್ಣಪ್ಪ ಸ್ವಾಮಿ ರವರ ಜೊತೆಗೆ ಸಾದಾ ಉಡುಪಿನಲ್ಲಿ ಹರಪನಹಳ್ಳಿ ಪಟ್ಟಣದ ಕೆಎಸ್‌ಆರ್‌ಟಿಸಿ ಬಸ್ ನಿಲ್ದಾಣಕ್ಕೆ ಹೋಗಿ ಕರೇಕಾನಳ್ಳಿ ಹನುಮಂತಪ್ಪ ಹಾಗೂ ಇತರರಿಗೆ ತೊಂದರೆ ಕೊಟ್ಟು ನಿಮ್ಮ ಜೊತೆ ಇದ್ದ ಸಹಪಾಠಿ ಸಿಪಿಸಿ-592 ಅಣ್ಣಪ್ಪ ಸ್ವಾಮಿಗೆ ಬೀಗದ ಕೈ ಚೈನಿನಿಂದ ಹೊಡೆಯಲು ಪ್ರೋತ್ಸಾಹಿಸಿ ಕರ್ತವ್ಯ ಚ್ಯುತಿ ಪ್ರದರ್ಶಿಸಿದ್ದೀರಿ."

3. "ನೀವು ದಿನಾಂಕ:05-06-2000 ರಂದು ರಾತ್ರಿ 11-30 ಗಂಟೆಗೆ ಹರಪನಹಳ್ಳಿ ಕಳ್ಳಿಕೇರಿ ಬಾವಿಯ ಹತ್ತಿರ ದಾರಿಯಲ್ಲಿ ಹೋಗುತ್ತಿದ್ದ ಮಹ್ಮದ್ ಅಲಿ ಬಿನ್ ಕರೀಂ ಸಾಬ್ ಎಂಬುವರನ್ನು ನಿಲ್ಲಿಸಿ ಅವರ ಜೇಬಿನಿಂದ ರೂ.500-00 ಹಣವನ್ನು ಕಸಿದು ಸುಲಿಗೆ ಮಾಡಿ ಈ ವಿಷಯವನ್ನು ಯಾರಿಗೂ ಹೇಳಬೇಡವೆಂದು ಬೆದರಿಸಿ ದುರ್ವರ್ತನೆಯನ್ನು ಪ್ರದರ್ಶಿಸಿದ್ದೀರಿ."

4. "ನೀವುಗಳು ಕಸಿದುಕೊಂಡ ರೂ.500-00 ಹಣವನ್ನು ನೀವು ಮತ್ತು ನಿಮ್ಮ ಸಹಪಾಠಿ ಸಿಪಿಸಿ-592 ಅಣ್ಣಪ್ಪ ಸ್ವಾಮಿ ರವರು ಯಾವ ಅಧಿಕಾರ ಇಲ್ಲದಿದ್ದರೂ ಹಂಚಿಕೊಂಡು ದುರ್ನಡತೆ ಪ್ರದರ್ಶಿಸಿದ್ದೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:12-01-2001ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ, ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಾವಣಗೆರೆ ಜಿಲ್ಲೆ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ:31-07-2001ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಕಾನೂನು ಮತ್ತು ಸುವ್ಯವಸ್ಥೆಯನ್ನು ಕಾಪಾಡಬೇಕಾದ ಜವಾಬ್ದಾರಿಯುತ ಪೊಲೀಸ್ ಅಧಿಕಾರಿಯೇ ಈ ರೀತಿ ಹೀನಾಯ ಕೃತ್ಯ ಎಸಗಿ ಪೊಲೀಸ್ ಇಲಾಖೆಯ ಘನತೆಗೆ ಕುಂದು ತಂದಿರುತ್ತಾರೆ. ಹೀಗಾಗಿ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದರೂ, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು, ಇವರ ಉದ್ದಟತನಕ್ಕೆ ಸಾಕ್ಷಿ ಆಗಿರುತ್ತದೆ. ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 79 ಪೊಸಿಅ 2002 ಬೆಂಗಳೂರು ದಿನಾಂಕ: 2ನೇ ಜುಲೈ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲೀಸ್ (ಶಿಸ್ತು ನಡವಳಿ) ನಿಯಮಾವಳಿ, 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎನ್. ನಾಗರಾಜ್, ಮಾಜಿ ಸಿಪಿಸಿ-262 ದಾವಣಗೆರೆ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:01-03-2002ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1114

**ಹೆಚ್.ಕೆ.ಗುಂಡೂರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎನ್.ಎಲ್.ಕಾಂಬಳೆ, ನಿವೃತ್ತ ಡಿವೈಎಸ್‌ಪಿ, ಬೆಳಗಾಂ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ, ಪರಿಷ್ಕರಣ ಮೇಲ್ಮನವಿ ಅರ್ಜಿ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾಂ ಇವರ ಆದೇಶ ಸಂಖ್ಯೆ:ಡಿಇ/124/1992-93. ದಿನಾಂಕ:15-01-1993.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಇವರ ಆದೇಶ ಸಂಖ್ಯೆ:ಸಿಬಿ/5/94/93-94 ದಿನಾಂಕ:27-03-1994.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:19-08-2003.

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಸಿಬಿ/5/94/93-94. ದಿನಾಂಕ:15-04-2005.

**ಪ್ರಸ್ತಾವನೆ:**

ಶ್ರೀ ಎನ್.ಎಲ್.ಕಾಂಬಳೆ, ನಿವೃತ್ತ ಡಿವೈಎಸ್‌ಪಿ, ಬೆಳಗಾಂ ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965 ರ ನಿಯಮ 7 ರಡಿ ದೋಷರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷರೋಪಣೆ:**

"Gross dereliction, negligence, of duty and disobedience of order in that, Sri, N.L. Kamble, DSP (Crime) Northern range, Belgaum, while working as circle police Inspector, Chikodi failed to conduct first half yearly inspection of chikodi police station and sadalga police station of his charge for the year 1992 as required as per order No 204 of KPM vol-I."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಮಹಾ ನಿರೀಕ್ಷಕರು ಉತ್ತರ ವಲಯ ಬೆಳಗಾಂ, ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:15–07–1993ರ ಆದೇಶದಲ್ಲಿ ಅರ್ಜಿದಾರರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ಬಡ್ತಿಗಳಿಗೆ ಧಕ್ಕೆ ಆಗದಂತೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ, ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:27–03–1994ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು, ಪರಿಶೀಲಿಸಲಾಗಿದೆ. ಅರ್ಜಿದಾರರು ತಮ್ಮ ಅಧೀನದಲ್ಲಿರುವ ಪೊಲೀಸ್ ಠಾಣೆಗಳ ಪರಿವೀಕ್ಷಣೆ ಮಾಡುವುದು ಆದ್ಯ ಕರ್ತವ್ಯವಾಗಿದ್ದರೂ ಆರು ತಿಂಗಳಲ್ಲಿ ಕಾಲಾವಕಾಶ ಸಿಗಲಿಲ್ಲವೆಂಬುದು ನಂಬಲು ಅಸಾಧ್ಯ. ಹಾಗೆಯೇ ಒಬ್ಬ ಡಿವೈಎಸ್‌ಪಿ ಹುದ್ದೆಯ ಅಧಿಕಾರಿಯ ವಿರುದ್ದ, ಉಪ ಪೊಲೀಸ್ ಮಹಾ ನಿರೀಕ್ಷಕರು ಹುದ್ದೆಯ ಪೊಲೀಸ್ ಅಧಿಕಾರಿಗೆ ಶಿಸ್ತಿನ ಕ್ರಮ ತೆಗೆದುಕೊಳ್ಳುವ ಅಧಿಕಾರವಿಲ್ಲವೆನ್ನುವುದು ಸಮಂಜಸವಾಗಿರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಕಂಡು ಬರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ಲಘು ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 182 ಪೊಸಿಅ 2005 ಬೆಂಗಳೂರು ದಿನಾಂಕ: 20ನೇ ಜುಲೈ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲಿಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎನ್.ಎಲ್.ಕಾಂಬಳೆ ನಿವೃತ್ತ ಡಿವೈಎಸ್‌ಪಿ ಬೆಳಗಾವಿ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:19–08–2003ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1141

**ಹೆಚ್.ಕೆ. ಗುಂಡೂರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಕೆ.ಎಂ. ಜಮದಾರ್, ಪಿಸಿ (ಚಾಲಕ) 587,1ನೇ ಪಡೆ, ಕೆಎಸ್‌ಆರ್‌ಪಿ., ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, 1ನೇ ಪಡೆ ಕೆಎಸ್‌ಆರ್‌ಪಿ, ಬೆಂಗಳೂರು ಇವರ ಆದೇಶ ಸಂಖ್ಯೆ:ಡಿಇ/21/2002–03 ಓಬಿ ಸಂಖ್ಯೆ:222/2003–04. ದಿನಾಂಕ:06–09–2003.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಮಹಾ ನಿರೀಕ್ಷಕರು, ಕೆಎಸ್‌ಆರ್‌ಪಿ, ಬೆಂಗಳೂರು ಇವರ ಆದೇಶ ಸಂಖ್ಯೆ:ಅಪೀಲು/19/2003–04 ದಿನಾಂಕ:13–07–2004.
3) ಅರ್ಜಿದಾರರ ಪರಿಷ್ಕರಣಾ ಮೇಲ್ಮನವಿ ಅರ್ಜಿ ದಿನಾಂಕ:04–10–2004.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರದ ಸಂಖ್ಯೆ:ಅಪೀಲು/2/62/2004, ದಿನಾಂಕ:30–04–2005.

**ಪ್ರಸ್ತಾವನೆ:–**

ಶ್ರೀ ಕೆ.ಎಂ. ಜಮಾದಾರ್ ಪಿಸಿ (ಚಾಲಕ) 587, 1ನೇ ಪಡೆ, ಕೆಎಸ್‌ಆರ್‌ಪಿ, ಬೆಂಗಳೂರು ಇವರ ವಿರುದ್ದ, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:–**

"ಶ್ರೀ ಕೆ.ಎಂ.ಜಮೇದಾರ್, ಪೇದೆ 587, 'ಇ' ದಳ 1ನೇ ಪಡೆ, ಕೆಎಸ್‌ಆರ್‌ಪಿ, ಬೆಂಗಳೂರು ಆದ ನಿಮ್ಮನ್ನು ದಿನಾಂಕ:22–08–2001 ರಂದು ವಿಶೇಷ ಕರ್ತವ್ಯಕ್ಕೆ ಎಸ್‌ಟಿಎಫ್‌ಗೆ ನೇಮಿಸಿದ್ದು, ಕೆಂಚಳ್ಳಿ ಗ್ರಾಮದಲ್ಲಿ ಕರ್ತವ್ಯ ನಿರ್ವಹಿಸುವ ಸಮಯದಲ್ಲಿ, ಸದರಿ ಗ್ರಾಮದ ನಿವಾಸಿ ಶ್ರೀ ಬಸಣ್ಣ ಇವರ ಪತ್ನಿ ಶ್ರೀಮತಿ ಮಹಾದೇವಿ ರವರ ಜೊತೆ ಅನೈತಿಕ ಸಂಬಂಧ ಬೆಳೆಸಿಕೊಂಡು ದಿನಾಂಕ: 14–07–2002ರಂದು ರಾತ್ರಿ ಆಕೆಯನ್ನು ಪೊಲೀಸ್ ವಾಹನದಲ್ಲಿ ಅಕ್ರಮವಾಗಿ ಸೇರಿಸಿಕೊಂಡು,

ಊರಿನ ಜನರು ಹಾಗೂ ಅಧಿಕಾರಿಯವರ ಕೈಗೆ ಸಿಕ್ಕಿಬಿದ್ದು, ನಂತರ ಸದರಿ ಮಹಿಳೆಯೊಂದಿಗೆ ಪಲಾಯನ ಮಾಡಿ, ಕರ್ತವ್ಯಕ್ಕೆ ಗೈರುಹಾಜರಾಗಿ ಕರ್ತವ್ಯದಲ್ಲಿ ಅತೀವ ದುರ್ನಡತೆ ಹಾಗೂ ಗಂಭೀರ ಸ್ವರೂಪದ ಅಶಿಸ್ತನ್ನು ಪ್ರದರ್ಶಿಸಿರುತ್ತೀರಿ. ಅಲ್ಲದೆ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯನ್ನು ಉಲ್ಲಂಘಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆಯೆಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, 1ನೇ ಪಡೆ, ಕೆಎಸ್‌ಆರ್‌ಪಿ ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ:06–09–2003ರ ಆದೇಶದಲ್ಲಿ ಅರ್ಜಿದಾರರ ವೇತನವನ್ನು ಐದು ವರ್ಷಗಳ ಕಾಲ ಪಿಸಿ ಹುದ್ದೆಯ ಕನಿಷ್ಟ ಮಟ್ಟಕ್ಕೆ ಇಳಿಸಿ, ನಂತರ ಹೊಸದಾಗಿ ವೇತನ ಬಡ್ತಿಗಳಿಸುವ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಮಹಾ ನಿರೀಕ್ಷಕರು, ಕೆಎಸ್‌ಆರ್‌ಪಿ ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ:13–07–2004ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಸಾರ್ವಜನಿಕ ಆಸ್ತಿಯ ರಕ್ಷಣೆ ಹಾಗೂ ಸಾರ್ವಜನಿಕರ ಮಾನ ಪ್ರಾಣ, ಕಾಪಾಡಬೇಕಾದವರೆ ಕರ್ತವ್ಯ ಚ್ಯುತಿ ಎಸಗಿದ್ದು, ಮಾಡಿರುವ ಆರೋಪ ಸಾಬೀತಾಗಿದ್ದು, ಈ ಕೃತ್ಯದಿಂದ ಇಲಾಖೆಯ ಬಗ್ಗೆ ಸಾರ್ವಜನಿಕರಲ್ಲಿ ಕೆಟ್ಟ ಮನೋಭಾವ ಬೆಳೆಯಲು ಕಾರಣವಾಗಿರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ಲಘು ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 207 ಪೊಸಿಅ 2004 ಬೆಂಗಳೂರು, ದಿನಾಂಕ: 20ನೇ ಜುಲೈ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲಿಸ್ (ಶಿಸ್ತು ನಡವಳಿ) ನಿಯಮಾವಳಿ, 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರಿ ಕೆ.ಎಂ.ಜಮಾದಾರ್, ಪಿಸಿ (ಚಾಲಕ) 587, 1ನೇ ಪಡೆ ಕೆಎಸ್‌ಆರ್‌ಪಿ ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ ದಿನಾಂಕ: 04–10–2004ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1134

**ಹೆಚ್.ಕೆ.ಗುಂಡೂರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ಇಂಧನ ಸಚಿವಾಲಯ**

**ವಿಷಯ:** ಮೆ:: ಭರೂಕಾ ಪವರ್ ಕಾರ್ಪೋರೇಷನ್ ಲಿಮಿಟೆಡ್ ಕಂಪನಿಯ 0.5 ಮೆಗಾ ವ್ಯಾಟ್ ಸಾಮರ್ಥ್ಯದ ರಾಜನ್ ಕೊಲ್ಲೂರು ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ:: ಜಮುನ ಇನ್‌ಫ್ರಾಸ್ಟ್ರಕ್ಚರ್ ಪ್ರೊಜೆಕ್ಟ್ಸ್ ಲಿಮಿಟೆಡ್ ಕಂಪನಿಗೆ ವರ್ಗಾವಣೆ ಮಾಡುವ ಬಗ್ಗೆ ಆದೇಶ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ : ಡಿಇ 53 ಎನ್‌ಸಿಇ 2001. ದಿನಾಂಕ : 8.10.2001.
2) ಸರ್ಕಾರಿ ಆದೇಶ ಸಂಖ್ಯೆ : ಇಂಇ 394 ಎನ್‌ಸಿಇ 2004 ದಿನಾಂಕ : 3.12.2004.
3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆ.ಆರ್.ಇ.ಡಿ/06/ರಾಜನ್‌ಕೊಲ್ಲೂರು/2005/1273 ದಿನಾಂಕ: 12/16.7.2005.

**ಪ್ರಸ್ತಾವನೆ:**

ಓದಲಾದ (1)ರ ಆದೇಶದಲ್ಲಿ ಮೆ:: ಭರೂಕಾ ಪವರ್ ಕಾರ್ಪೋರೇಷನ್ ಲಿಮಿಟೆಡ್ ಕಂಪನಿಗೆ 0.5 ಮೆಗಾ ವ್ಯಾಟ್ ಸಾಮರ್ಥ್ಯದ ರಾಜನ್ ಕೊಲ್ಲೂರು ಕಿರು ಜಲ ವಿದ್ಯುತ್ ಯೋಜನೆಯನ್ನು ಗುಲ್ಬರ್ಗಾ ಜಿಲ್ಲೆಯ ಶೋರಾಪುರ ತಾಲ್ಲೂಕಿನ ರಾಜನ್ ಕೊಲ್ಲೂರು ಎಂಬಲ್ಲಿ ಹಂಚಿಕೆ ಮಾಡಲಾಗಿದೆ.

ಓದಲಾದ (2)ರ ಆದೇಶದಲ್ಲಿ ಸದರಿ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು ದಿನಾಂಕ : 31.12.2007 ರವರೆಗೆ ವಿಸ್ತರಿಸಲಾಗಿದೆ.

ಓದಲಾದ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು, ಮೆ:: ಭರೂಕಾ ಪವರ್ ಕಾರ್ಪೋರೇಷನ್ ಲಿಮಿಟೆಡ್ ಕಂಪನಿಯ 0.5 ಮೆಗಾ ವ್ಯಾಟ್ ಸಾಮರ್ಥ್ಯದ ರಾಜನ್ ಕೊಲ್ಲೂರು ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ:: ಭರೂಕಾ ಪವರ್ ಕಾರ್ಪೋರೇಷನ್ ಲಿಮಿಟೆಡ್ ಕಂಪನಿಯ ಸಮೂಹ ಕಂಪನಿಯಾಗಿರುವ ಮೆ:: ಜಮುನ ಇನ್‌ಫ್ರಾಸ್ಟ್ರಕ್ಚರ್ ಪ್ರೊಜೆಕ್ಟ್ಸ್ ಲಿಮಿಟೆಡ್ ಕಂಪನಿಯ ಹೆಸರಿಗೆ ವರ್ಗಾವಣೆ ಮಾಡಲು ಶಿಫಾರಸ್ಸು ಮಾಡಿರುತ್ತಾರೆ. ಹೀಗೆ ಮಾಡುವುದರಿಂದ ಅತಿ ಶೀಘ್ರದಲ್ಲಿ ಯೋಜನೆಯನ್ನು ಅನುಷ್ಠಾನ ಮಾಡಲು ಅನುಕೂಲವಾಗುತ್ತದೆ ಎಂದು ತಿಳಿಸಿರುತ್ತಾರೆ.

ಈ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 219 ಎನ್‌ಸಿಇ 2005 ಬೆಂಗಳೂರು, ದಿನಾಂಕ: 3ನೇ ಆಗಸ್ಟ್ 2005**

ಮೆ:: ಭರೂಕಾ ಪವರ್ ಕಾರ್ಪೋರೇಷನ್ ಲಿಮಿಟೆಡ್ ಕಂಪನಿಗೆ ಗುಲ್ಬರ್ಗಾ ಜಿಲ್ಲೆಯ ಶೋರಾಪುರ ತಾಲ್ಲೂಕಿನ ರಾಜನ್ ಕೊಲ್ಲೂರು ಎಂಬಲ್ಲಿ ಹಂಚಿಕೆ ಮಾಡಲಾಗಿರುವ 0.5 ಮೆಗಾ ವ್ಯಾಟ್ ಸಾಮರ್ಥ್ಯದ ರಾಜನ್ ಕೊಲ್ಲೂರು ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ:: ಜಮುನ ಇನ್‌ಫ್ರಾಸ್ಟ್ರಕ್ಚರ್ ಪ್ರೊಜೆಕ್ಟ್ಸ್ ಲಿಮಿಟೆಡ್ ಕಂಪನಿಯ ಹೆಸರಿನಲ್ಲಿ ವರ್ಗಾವಣೆ ಮಾಡಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1137 **ಸುರೇಶ್.ಬಿ.ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**ವಿಷಯ:** ಮೆಸರ್ಸ್ ಕಟ್ಟೆಪುರ ವಿದ್ಯುತ್ ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಕಟ್ಟೆಪುರ ಕಿರು ಜಲ ವಿದ್ಯುತ್ ಯೋಜನಾನುಷ್ಠಾನಕ್ಕಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ ಆದೇಶ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ : ಇಂಇ 54 ಎನ್‌ಸಿಇ 1999 (7), ದಿನಾಂಕ : 9.7.999.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ / 06 / ಕಟ್ಟೆಪುರ / 2005 / 1182, ದಿನಾಂಕ: 4/6.07.2005.

**ಪ್ರಸ್ತಾವನೆ:**

ಓದಲಾದ (1)ರ ಆದೇಶದಲ್ಲಿ ಮೆಸರ್ಸ್ ಕಟ್ಟೆಪುರ ವಿದ್ಯುತ್ ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ ಹಾಸನ ಜಿಲ್ಲೆಯ ಅರಕಲಗೂಡು ತಾಲ್ಲೂಕಿನ ಕಟ್ಟೆಪುರ ಗ್ರಾಮದ ಬಳಿ ಕಟ್ಟೆಪುರ ಅಣೆಕಟ್ಟಿನ ಬಲ ದಂಡೆಯಲ್ಲಿ 0.5 ಮೆಗಾವ್ಯಾಟ್ ಸಾಮರ್ಥ್ಯದ ಕಟ್ಟೆಪುರ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು, ಸದರಿ ಯೋಜನೆಯನ್ನು ಅನುಷ್ಠಾನಗೊಳಿಸುವಲ್ಲಿ ಅಭಿವೃದ್ಧಿದಾರರು ಸಕ್ರಿಯವಾಗಿ ಕಾರ್ಯನಿರತರಾಗಿರುವರೆಂದು ತಿಳಿಸಿ ಈ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಧಿಯನ್ನು ಮುಂದಿನ 18 ತಿಂಗಳುಗಳಿಗೆ ವಿಸ್ತರಿಸಲು ಶಿಫಾರಸ್ಸು ಮಾಡಿರುವ ಹಿನ್ನಲೆಯಲ್ಲಿ, ಪ್ರಸ್ತಾವನೆಯನ್ನು ಸರ್ಕಾರ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 199 ಎನ್‌ಸಿಇ 2005, ಬೆಂಗಳೂರು, ದಿನಾಂಕ: 8ನೇ ಆಗಸ್ಟ್ 2005**

ಮೆಸರ್ಸ್ ಕಟ್ಟೆಪುರ ವಿದ್ಯುತ್ ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ ಹಾಸನ ಜಿಲ್ಲೆಯ ಅರಕಲಗೂಡು ತಾಲ್ಲೂಕಿನ ಕಟ್ಟೆಪುರ ಗ್ರಾಮದ ಬಳಿ ಕಟ್ಟೆಪುರ ಅಣೆಕಟ್ಟಿನ ಬಲ ದಂಡೆಯಲ್ಲಿ 0.5 ಮೆಗಾವ್ಯಾಟ್ ಸಾಮರ್ಥ್ಯದ ಕಟ್ಟೆಪುರ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಈ ಆದೇಶ ಹೊರಡಿಸಿದ ದಿನಾಂಕದಿಂದ ಮುಂದಿನ 18 ತಿಂಗಳುಗಳ ಅವಧಿಗೆ ಕಾಲಾವಕಾಶವನ್ನು ವಿಸ್ತರಿಸಲಾಗಿದೆ.

ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1179 **ಸುರೇಶ್ ಬಿ. ಕೃಷ್ಣಪ್ಪನವರ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**ವಿಷಯ:** ಮೆಸರ್ಸ್ ಮುರುಡೇಶ್ವರ ಪವರ್ ಕಾರ್ಪೋರೇಷನ್ ಲಿಮಿಟೆಡ್ ಕಂಪನಿಗೆ 18 ಮೆಗಾ ವ್ಯಾಟ್ ಸಾಮರ್ಥ್ಯದ ದಾಂಡೇಲಿ ಕಿರು ಜಲ ವಿದ್ಯುತ್ ಯೋಜನಾನುಷ್ಠಾನಕ್ಕಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ ಆದೇಶ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ : ಇಂಇ 96 ಎನ್‌ಸಿಇ 2000, ದಿನಾಂಕ : 10.7.2000.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ / 06 / ದಾಂಡೇಲಿ / 2005 / 1418, ದಿನಾಂಕ: 2.8.2005.

**ಪ್ರಸ್ತಾವನೆ:**

ಓದಲಾದ (1)ರ ಆದೇಶದಲ್ಲಿ ಮೆಸರ್ಸ್ ಮುರುಡೇಶ್ವರ ಪವರ್ ಕಾರ್ಪೋರೇಷನ್ ಲಿಮಿಟೆಡ್ ಕಂಪೆನಿಗೆ ಉತ್ತರ ಕನ್ನಡ ಜಿಲ್ಲೆಯ ದಾಂಡೇಲಿಯಲ್ಲಿನ ಕಾಳಿ ನದಿಗೆ ಅಡ್ಡಲಾಗಿ 18 ಮೆಗಾವ್ಯಾಟ್ ಸಾಮರ್ಥ್ಯದ ದಾಂಡೇಲಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು, ಸದರಿ ಯೋಜನೆಯನ್ನು ಅನುಷ್ಠಾನಗೊಳಿಸುವಲ್ಲಿ ವಿವರವಾದ ಯೋಜನಾ ವರದಿಗೆ ವಿವಿಧ ಇಲಾಖೆಗಳಿಂದ ಅನುಮೋದನೆ ಪಡೆಯಲು ಕಾಲಾವಕಾಶ ಬೇಕಾಗಿರುವುದರಿಂದ ಈ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಧಿಯನ್ನು ಮುಂದಿನ 2 ವರ್ಷಗಳವರೆಗೆ ವಿಸ್ತರಿಸಲು ಶಿಫಾರಸ್ಸು ಮಾಡಿರುವ ಹಿನ್ನಲೆಯಲ್ಲಿ, ಪ್ರಸ್ತಾವನೆಯನ್ನು ಸರ್ಕಾರ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 234 ಎನ್‌ಸಿಇ 2005, ಬೆಂಗಳೂರು, ದಿನಾಂಕ: 9ನೇ ಆಗಸ್ಟ್ 2005**

ಮೆಸರ್ಸ್ ಮುರುಡೇಶ್ವರ ಪವರ್ ಕಾರ್ಪೋರೇಷನ್ ಲಿಮಿಟೆಡ್ ಕಂಪೆನಿಗೆ ಉತ್ತರ ಕನ್ನಡ ಜಿಲ್ಲೆಯ ದಾಂಡೇಲಿಯಲ್ಲಿನ ಕಾಳಿ ನದಿಗೆ ಅಡ್ಡಲಾಗಿ 18 ಮೆಗಾವ್ಯಾಟ್ ಸಾಮರ್ಥ್ಯದ ದಾಂಡೇಲಿ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಈ ಆದೇಶ ಹೊರಡಿಸಿದ ದಿನಾಂಕದಿಂದ ಮುಂದಿನ 2 ವರ್ಷಗಳ ಅವಧಿಗೆ ಕಾಲಾವಕಾಶವನ್ನು ವಿಸ್ತರಿಸಲಾಗಿದೆ.

ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1180

**ಸುರೇಶ್ ಬಿ. ಕೃಷ್ಣಪ್ಪನವರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**ವಿಷಯ:** ಪವನ ವಿದ್ಯುತ್ ಯೋಜನೆ ಅಭಿವೃದ್ಧಿಗಾಗಿ ಹಂಚಿಕೆ ಆದೇಶ.

**ಓದಲಾಗಿದೆ:** 1) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/ಎಸ್‌ಡಿಪಿಎಲ್/2005/1377/1173 ದಿನಾಂಕ 26.7.2005 ಮತ್ತು 05.7.2005.

2) ದಿನಾಂಕ 28.7.2005ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ಸುಜ್ಲಾನ್ ಡೆವಲಪರ್ಸ್ ಲಿಮಿಟೆಡ್ ಬೆಂಗಳೂರು ಈ ಕಂಪನಿಗೆ ರಾಯಚೂರು ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಒಟ್ಟು **82.6** ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಓದಲಾದ (2)ರಲ್ಲಿ ಹೇಳಿದ ಹಂಚಿಕೆ ಸಮಿತಿ ಸಭೆ ನಡವಳಿಯಲ್ಲಿನ ಪವನ ವಿದ್ಯುತ್ ಯೋಜನೆಗಳ ಹಂಚಿಕೆಯ ಕ್ರಮ ಸಂಖ್ಯೆ 12 ರಲ್ಲಿ ಅನುಮೋದಿಸಿದ್ದರನ್ವಯ ಕೂಲಂಕಷವಾಗಿ ಪರಿಶೀಲಿಸಿದ್ದು ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 191 ಎನ್‌ಸಿಇ 2005 ಬೆಂಗಳೂರು, ದಿನಾಂಕ 19ನೇ ಆಗಸ್ಟ್ 2005**

ಮೆ: ಸುಜ್ಲಾನ್ ಡೆವಲಪರ್ಸ್ ಲಿಮಿಟೆಡ್ ಬೆಂಗಳೂರು ಈ ಕಂಪನಿಗೆ ರಾಯಚೂರು ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಒಟ್ಟು **82.6** ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಳಗೆ ವಿವರಿಸಿರುವಂತೆ ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ :

| Sl. No. | Proposed capacity in MW | Nearby villages of the proposed areas | Geographical area description of the project |
|---|---|---|---|
| 1 | 7.2 MW | Kalamange, Raichur District. | Low altitude, non-contiguous NW & SE oriented ridge is situated on the S-W of Kalamange has 593, 560 elevations. The area is described as open scrub cactus. The proposed areas covered in the following Geographical co-ordinates:<br>**Latitude** : $15^0$41'21" – $15^0$43'48"N<br>**Longutide** : $76^0$30'36" – $76^0$32'30"E<br>**Peaks** :593,560m Amsl |
| 2 | 15.6MW | Kurugod, Sindigere, Bellary District. | The potential area identified as 'A' & 'B' are situated close by Kurugod and Sindigere villages. These two areas are of as open scrub and low altitude potentials. The Proposed area is coverd in the following Geographical co-odinates:<br>**Latitude** : $15^0$20'0" – $15^0$25'0"N<br>**Longutide** : $76^0$47'30" – $76^0$55'0"E<br>**Peaks** : 599,592,554,580,572m Amsl |
| 3 | 43.8 MW | Subrayanahalli, Devagerehalli, Swamyhalli, Bellary District | A large complex area with high altitude is situated in the Kumarswamy Betta Reserve Forest. As per the Topomap the entire proposed area is made open cast manganese ore and is fairly dense mixed jungle. The Proposed area is coverd in the following Geographical co-odinates:<br>**Latitude** : $14^0$58'56" – $15^0$2'56"N<br>**Longutide** : $76^0$30'48" – $76^0$40'36"E<br>**Peaks**: 911,989,930,1106,1071,840,962,892,1034, 1029, 939 997,982m Amsl |

| Sl. No. | Proposed capacity in MW | Nearby villages of the proposed areas | Geographical area description of the project |
|---|---|---|---|
| 4 | 16 MW | Nemakallu, Bellary District | An E-W oriented hillock situated North of Nemakallu and located South of Bellary town. The area earmark is in the mincharry reserve forest and also called as Devaragudda. . The Proposed area is coverd in the following Geographical co-odinates:<br>**Latitude** : $15^0$0'15" – $15^0$3'5"N<br>**Longutide** : $76^0$51'48" – $76^0$57'55"E<br>**Peaks** :683,622,694,609,613,669,662m Amsl |
| **TOTAL** | **82.6 MW** | | |

1. ಯೋಜನಾಭಿವೃದ್ಧಿದಾರರು ಸರ್ಕಾರದೊಂದಿಗೆ ಒಡಂಬಡಿಕೆ. ಮಾಡಿಕೊಳ್ಳುವ ಮೊದಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮೆಗಾ ವ್ಯಾಟ್ ಒಂದಕ್ಕೆ ರೂ 25,000 ದಂತೆ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 3 ತಿಂಗಳ ಒಳಗೆ ಯೋಜನಾಭಿವೃದ್ಧಿದಾರರು ರೂ.400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸ ಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್ ನಕ್ಷೆ ಮತ್ತು ವಿಂಡ್ ಫಾರ್ಮನ ಲೇ ಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.
4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಠಕದಲ್ಲಿ ವಿವರಿಸಿರುವಂತೆ ಪ್ರತೀ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸ೦ಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ |
|---|---|---|
| > 200 ಕಿ.ವ್ಯಾ. ನಿ೦ದ 300 ಕಿ.ವ್ಯಾ. | 18 | 1 |
| > 300 ಕಿ.ವ್ಯಾ. ನಿ೦ದ 500 ಕಿ.ವ್ಯಾ. | 15 | 1 |
| > 500 ಕಿ.ವ್ಯಾ. ನಿ೦ದ 750 ಕಿ.ವ್ಯಾ. | 12 | 1 |
| > 750 ಕಿ.ವ್ಯಾ. ನಿ೦ದ 1000 ಕಿ.ವ್ಯಾ. | 8 ರಿ೦ದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ/ ಕಂದಾಯ / ಪರಿಸರ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳಬಹುದು.
7. ಮಂಡಳಿಯ ನೀತಿ ನಿಯಮಗಳಿಗನುಗುಣವಾಗಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವೀಲಿಂಗ್ ಮತ್ತು ಬ್ಯಾಂಕಿಂಗ್ / ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.
8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.
9. ಯೋಜನೆಯನ್ನು ತ್ವರಿತವಾಗಿ ಮುಕ್ತಾಯ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವಂತೆ ವಿನಂತಿಸಲಾಗಿದೆ.
10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಅಭಿವೃದ್ದಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1190

**ಸುರೇಶ್ ಬಿ. ಕೃಷ್ಣಪ್ಪನವರ್,**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಪವನ ವಿದ್ಯುತ್ ಯೋಜನೆ ಅಭಿವೃದ್ಧಿಗಾಗಿ ಹಂಚಿಕೆ ಅದೇಶ.

**ಓದಲಾಗಿದೆ:** 1) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/ಎಸ್‌ಇಎಲ್–ಎಸ್ಕಾಂ/2005/1169 ದಿನಾಂಕ 05.7.2005.

2) ದಿನಾಂಕ 28.7.2005ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಮೆ: ಸುಜ್ಲಾನ್ ಡೆವಲಪರ್ಸ್ ಲಿಮಿಟೆಡ್ ಬೆಂಗಳೂರು ಇವರಿಗೆ ತುಮಕೂರು ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ಒಟ್ಟು 26.4 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಓದಲಾದ (2)ರಲ್ಲಿ ಹೇಳಿದ ಹಂಚಿಕೆ ಸಮಿತಿ ಸಭೆ ನಡವಳಿಯಲ್ಲಿ ಪವನ ವಿದ್ಯುತ್ ಯೋಜನೆಗಳ ಹಂಚಿಕೆಯ ಕ್ರಮ ಸಂಖ್ಯೆ 10ರಲ್ಲಿ ಅನುಮೋದಿಸಿದ್ದರನ್ವಯ ಕೂಲಂಕಷವಾಗಿ ಪರಿಶೀಲಿಸಿದ್ದು ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 193 ಎನ್‌ಸಿಇ 2005 ಬೆಂಗಳೂರು, ದಿನಾಂಕ 19ನೇ ಆಗಸ್ಟ್ 2005**

ಮೆ: ಸುಜ್ಲಾನ್ ಡೆವಲಪರ್ಸ್ ಲಿಮಿಟೆಡ್, ಬೆಂಗಳೂರು ಇವರಿಗೆ ತುಮಕೂರು ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ಒಟ್ಟು 26.4 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಳಗೆ ವಿವರಿಸಿರುವಂತೆ ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ :

| Sl No. | Proposed capacity in MW | Nearby villages of the proposed areas | Geographical area description of the project |
|---|---|---|---|
| 1 | 8.4 MW | Guddagapalya,Bajatadripura, Tumkur District. | A N-S oriented non-contiguous ridge situated on the N-E of Guddagapalya and Bajatadripura villages. It has 1030 and 978m peaks. The proposed areas covered in the following Geographical co-ordinates:<br>**Latitude** : $13^{0}$4'12" – $13^{0}$22'10"N<br>**Longutide** : $76^{0}$41'6" – $76^{0}$42'46"E<br>**Peaks** :1038,978m Amsl |
| | 3.6 MW | Vajrapura, Chikkaramapura, Tumkur District | A non-contiguous isolated hillocks located on the S-W and West of Vajrapura, Chikkaramapura. The proposed areas covered in the following Geographical co-ordinates:<br>**Latitude** : $13^{0}$25'0" – $13^{0}$25'0"N<br>**Longutide** : $76^{0}$42'3" – $76^{0}$44'21"E<br>**Peaks** :953,985m Amsl |
| 2 | 6MW | Mallappanahatti, Chitradurga District | A circular plateau is located on South of Mallappanahatti and is described as open scrub. The Proposed area is coverd in the following Geographical co-odinates:<br>**Latitude** : $14^{0}$10'28" – $14^{0}$12'37s"N<br>**Longutide** : $76^{0}$21'56" – $76^{0}$23'29"E<br>**Peaks** : 950,952,987m Amsl |
| 3 | 8.4 MW | Sirigere, Alagatta, Chitradurga District. | A plain area situated on the west and S-W of Sirigere, Hosahatti and Siddapura villages.The other N-S oriented ridge located on South of Alagatta and these two proposed areas are covered in the covered in the following Geographical co-odinates:<br>**Latitude** : $14^{0}$15'0" – $14^{0}$18'15"N<br>**Longutide** : $76^{0}$10'0" – $76^{0}$15'0"E<br>**Peaks** :760,788,795,783,811,823m Amsl |
| **TOTAL** | **26.4 MW** | | |

1. ಯೋಜನಾಭಿವೃದ್ಧಿದಾರರು ಸರ್ಕಾರದೊಂದಿಗೆ ಒಡಂಬಡಿಕೆ. ಮಾಡಿಕೊಳ್ಳುವ ಮೊದಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮೆಗಾ ವ್ಯಾಟ್ ಒಂದಕ್ಕೆ ರೂ 25,000 ದಂತೆ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 3 ತಿಂಗಳ ಒಳಗೆ ಯೋಜನಾಭಿವೃದ್ಧಿದಾರರು ರೂ.400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.

3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್ ನಕ್ಷೆ ಮತ್ತು ವಿಂಡ್ ಫಾರ್ಮನ ಲೇ ಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.
4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಠಕದಲ್ಲಿ ವಿವರಿಸಿರುವಂತೆ ಪ್ರತೀ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕ೦ಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ |
|---|---|---|
| > 200 ಕಿ.ವ್ಯಾ. ನಿ೦ದ 300 ಕಿ.ವ್ಯಾ. | 18 | 1 |
| > 300 ಕಿ.ವ್ಯಾ. ನಿ೦ದ 500 ಕಿ.ವ್ಯಾ. | 15 | 1 |
| > 500 ಕಿ.ವ್ಯಾ. ನಿ೦ದ 750 ಕಿ.ವ್ಯಾ. | 12 | 1 |
| > 750 ಕಿ.ವ್ಯಾ. ನಿ೦ದ 1000 ಕಿ.ವ್ಯಾ. | 8 ರಿ೦ದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿ೦ದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ/ ಕಂದಾಯ / ಪರಿಸರ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳಬಹುದು.
7. ಮಂಡಳಿಯ ನೀತಿ ನಿಯಮಗಳಿಗನುಗುಣವಾಗಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವೀಲಿಂಗ್ ಮತ್ತು ಬ್ಯಾಂಕಿಂಗ್ / ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.
8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.
9. ಯೋಜನೆಯನ್ನು ತ್ವರಿತವಾಗಿ ಮುಕ್ತಾಯ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವಂತೆ ವಿನಂತಿಸಲಾಗಿದೆ.
10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.

ಕರ್ನಾಟಕ ರಾಜ್ಯ ಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1192

**ಸುರೇಶ್ ಬಿ. ಕೃಷ್ಣಪ್ಪನವರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**ವಿಷಯ:** ಪವನ ವಿದ್ಯುತ್ ಯೋಜನೆ ಅಭಿವೃದ್ಧಿಗಾಗಿ ಹಂಚಿಕೆ ಅದೇಶ.

**ಓದಲಾಗಿದೆ:** 1) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/ಎಸ್‌ಡಿಪಿಎಲ್/2005/1378/1172 ದಿನಾಂಕ 26.7.2005 ಮತ್ತು 05.7.2005.

2) ದಿನಾಂಕ 28.7.2005ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ಸುಜ್ಲಾನ್ ಡೆವಲಪರ್ಸ್ ಲಿಮಿಟೆಡ್, ಬೆಂಗಳೂರು ಈ ಕಂಪನಿಗೆ ಶಿವಮೊಗ್ಗ ಮತ್ತು ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಒಟ್ಟು **126** ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಓದಲಾದ (2)ರಲ್ಲಿ ಹೇಳಿದ ಹಂಚಿಕೆ ಸಮಿತಿ ಸಭೆ ನಡವಳಿಯಲ್ಲಿನ ಪವನ ವಿದ್ಯುತ್ ಯೋಜನೆಯ ಹಂಚಿಕೆಯ ಕ್ರಮ ಸಂಖ್ಯೆ 11ರಲ್ಲಿ ಅನುಮೋದಿಸಿದ್ದರನ್ವಯ ಕೂಲಂಕಷವಾಗಿ ಪರಿಶೀಲಿಸಿದ್ದು ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

ಸರ್ಕಾರಿ ಆದೇಶ ಸಂಖ್ಯೆ : ಇಎನ್ 192 ಎನ್‌ಸಿಇ 2005 ಬೆಂಗಳೂರು, ದಿನಾಂಕ 19ನೇ ಆಗಸ್ಟ್ 2005

ಮೆ: ಸುಜ್ಲಾನ್ ಡೆವಲಪರ್ಸ್ ಲಿಮಿಟೆಡ್, ಬೆಂಗಳೂರು ಈ ಕಂಪನಿಗೆ ಶಿವಮೊಗ್ಗ ಮತ್ತು ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಒಟ್ಟು 126 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಳಗೆ ವಿವರಿಸಿರುವಂತೆ ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ :

| Sl No. | Proposed capacity in MW | Nearby villages of the proposed areas | Geographical area description of the project |
|---|---|---|---|
| 1 | 45 MW | Malligere, Arenahalli, Shimoga District. | The porposed area is located on the SW of Pandavamatti and is situated in the Rangaiyyanagiri State Forest. The proposed area is covered in the following Geographical co-ordinates:<br>**Latitude** : $13^0$50'37" – $14^0$0'0"N<br>**Longutide** : $75^0$51'31" – $75^0$57'56"E<br>**Peaks** :902,985,961,1011,1004,951,810,867m Amsl |
| | 41 MW | Bommanakatti, Bhadrapura, Kallapura, Nerlekar, Antaragange & Besilumane, Shimoga District | A vast area as earmaked on the toposheet has several peaks and is situated on East NE and SW of Kudaligere village. The proposed area is covered in the following Geographical co-ordinates:<br>**Latitude** : $13^0$50'0" – $14^0$0'0"N<br>**Longutide** : $75^0$45'0" – $75^0$51'31"E<br>**Peaks**:691,802,744,848,913,774,876,852,878,804,795, 813, 868m Amsl |
| | 40 MW | Ragibasavanahalli, Hosahalli, Durugire, Balekatte, Shimoga & Chikkamagalore District. | A large complex area is situated in Hadikere East State forest and has number of peaks. The area as earmark on the toposheet is located on the NW, North and N-E of Ragibasavanahalli. The proposed area is covered in the following Geographical co-ordinates:<br>**Latitude** : $13^0$45'0" – $13^0$50'0"N<br>**Longutide** : $75^0$46'40" – $75^0$66'26"E<br>**Peaks**: 906,683,782,950,1074,969,934,841,818, 962,801m Amsl |
| **TOTAL** | **126 MW** | | |

1. ಯೋಜನಾಭಿವೃದ್ಧಿದಾರರು ಸರ್ಕಾರದೊಂದಿಗೆ ಒಡಂಬಡಿಕೆ. ಮಾಡಿಕೊಳ್ಳುವ ಮೊದಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮೆಗಾ ವ್ಯಾಟ್ ಒಂದಕ್ಕೆ ರೂ 25,000 ದಂತೆ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 3 ತಿಂಗಳ ಒಳಗೆ ಯೋಜನಾಭಿವೃದ್ಧಿದಾರರು ರೂ.400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸ ಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್ ನಕ್ಷೆ ಮತ್ತು ವಿಂಡ್ ಫಾರ್ಮನ ಲೇ ಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.
4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಠಕದಲ್ಲಿ ವಿವರಿಸಿರುವಂತೆ ಪ್ರತೀ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕ೦ಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ |
|---|---|---|
| > 200 ಕಿ.ವ್ಯಾ. ನಿ೦ದ 300 ಕಿ.ವ್ಯಾ. | 18 | 1 |
| > 300 ಕಿ.ವ್ಯಾ. ನಿ೦ದ 500 ಕಿ.ವ್ಯಾ. | 15 | 1 |
| > 500 ಕಿ.ವ್ಯಾ. ನಿ೦ದ 750 ಕಿ.ವ್ಯಾ. | 12 | 1 |
| > 750 ಕಿ.ವ್ಯಾ. ನಿ೦ದ 1000 ಕಿ.ವ್ಯಾ. | 8 ರಿ೦ದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿ೦ದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ/ ಕಂದಾಯ / ಪರಿಸರ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳಬಹುದು.
7. ಮಂಡಳಿಯ ನೀತಿ ನಿಯಮಗಳಿಗನುಗುಣವಾಗಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವೀಲಿಂಗ್ ಮತ್ತು ಬ್ಯಾಂಕಿಂಗ್ / ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.
8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.
9. ಯೋಜನೆಯನ್ನು ತ್ವರಿತವಾಗಿ ಮುಕ್ತಾಯ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವಂತೆ ವಿನಂತಿಸಲಾಗಿದೆ.
10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.

ಕರ್ನಾಟಕ ರಾಜ್ಯ ಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1191

**ಸುರೇಶ್ ಬಿ. ಕೃಷ್ಣಪ್ಪನವರ್,**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಪವನ ವಿದ್ಯುತ್ ಯೋಜನೆ ಅಭಿವೃದ್ಧಿಗಾಗಿ ಹಂಚಿಕೆ ಅದೇಶ.

**ಓದಲಾಗಿದೆ:** 1) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ/08/ಎಸ್‌ಡಿಪಿಎಲ್/2005/1375/1170 ದಿನಾಂಕ 26.7.2005 ಮತ್ತು 05.7.2005.

2) ದಿನಾಂಕ 28.7.2005ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಮೆ: ಸುಜ್ಲಾನ್ ಡೆವಲಪರ್ಸ್ ಲಿಮಿಟೆಡ್, ಬೆಂಗಳೂರು ಈ ಕಂಪನಿಗೆ ಧಾರವಾಡ ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ಒಟ್ಟು 32.4 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಓದಲಾದ (2)ರಲ್ಲಿ ಹೇಳಿದ ಹ೦ಚಿಕೆ ಸಮಿತಿ ಸಭೆ ನಡವಳಿಯಲ್ಲಿನ ಪವನ ವಿದ್ಯುತ್ ಯೋಜನೆಗಳ ಹಂಚಿಕೆಯ ಕ್ರಮ ಸಂಖ್ಯೆ 9ರಲ್ಲಿ ಅನುಮೋದಿಸಿದ್ದರನ್ವಯ ಕೂಲಂಕಷವಾಗಿ ಪರಿಶೀಲಿಸಿದ್ದು ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 194 ಎನ್‌ಸಿಇ 2005 ಬೆಂಗಳೂರು, ದಿನಾಂಕ 19ನೇ ಆಗಸ್ಟ್ 2005**

ಮೆ: ಸುಜ್ಲಾನ್ ಡೆವಲಪರ್ಸ್ ಲಿಮಿಟೆಡ್, ಬೆಂಗಳೂರು ಈ ಕಂಪನಿಗೆ ಧಾರವಾಡ ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ಒಟ್ಟು 32.4 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಳಗೆ ವಿವರಿಸಿರುವಂತೆ ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ :

| Sl No. | Proposed capacity in MW | Nearby villages of the proposed areas | Geographical area description of the project |
|---|---|---|---|
| 1 | 17.4 MW | Jalligere, Majjur, Kadkol, Hosahalli, Kusalapura, Dharwad District | The independant isolated hillocks located around Kadkol village are identified on the basis of the peaks mentioned on the ridges are 703, 690, 790, 879, 733m. The proposed areas covered in the following Geographical co-ordinates:<br>**Latitude** : $15^0$10'0" – $15^0$13'10"N<br>**Longutide** : $75^0$38'22" – $75^0$42'31"E<br>**Peaks** :703, 690, 790, 879, 733m Amsl |

| Sl No. | Proposed capacity in MW | Nearby villages of the proposed areas | Geographical area description of the project |
|---|---|---|---|
| | 2.4 MW | Machhinahalli, Dharwad District | A NW-SE oriented ridge located on the South of Machhinahalli and has 708m peak. The proposed areas covered in the following Geographical co-ordinates:<br>**Latitude** : $15^0$7'5" – $15^0$7'51"N<br>**Longutide** : $75^0$40'25" – $75^0$40'58"E<br>**Peaks**:708m Amsl |
| 2 | 12.6 MW | Beladadithanda, Dharwad District | Non prominent, non-contiguous, plateau's are located on the East and SE of Beladadithanda. The Proposed area is covered in the following Geographical co-ordinates:<br>**Latitude** : $15^0$15'42" – $15^0$20'18"N<br>**Longutide** : $75^0$35'55" – $75^0$40'13"E<br>**Peaks**: 776,728,743,723,794m Amsl |
| **TOTAL** | **32.4 MW** | | |

1. ಯೋಜನಾಭಿವೃದ್ಧಿದಾರರು ಸರ್ಕಾರದೊಂದಿಗೆ ಒಡಂಬಡಿಕೆ. ಮಾಡಿಕೊಳ್ಳುವ ಮೊದಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮೆಗಾ ವ್ಯಾಟ್ ಒಂದಕ್ಕೆ ರೂ 25,000 ದಂತೆ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 3 ತಿಂಗಳ ಒಳಗೆ ಯೋಜನಾಭಿವೃದ್ಧಿದಾರರು ರೂ.400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸ ಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್ ನಕ್ಷೆ ಮತ್ತು ವಿಂಡ್ ಫಾರ್ಮನ ಲೇ ಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.
4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಠಕದಲ್ಲಿ ವಿವರಿಸಿರುವಂತೆ ಪ್ರತೀ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ |
|---|---|---|
| > 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| > 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| > 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| > 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ/ ಕಂದಾಯ / ಪರಿಸರ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳಬಹುದು.
7. ಮಂಡಳಿಯ ನೀತಿ ನಿಯಮಗಳಿಗನುಗುಣವಾಗಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವೀಲಿಂಗ್ ಮತ್ತು ಬ್ಯಾಂಕಿಂಗ್ / ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.
8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.

9. ಯೋಜನೆಯನ್ನು ತ್ವರಿತವಾಗಿ ಮುಕ್ತಾಯ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವಂತೆ ವಿನಂತಿಸಲಾಗಿದೆ.
10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.

ಕರ್ನಾಟಕ ರಾಜ್ಯ ಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1193

**ಸುರೇಶ್ ಬಿ. ಕೃಷ್ಣಪ್ಪನವರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

## ENERGY SECRETARIAT

**Sub:** Extension of time limit to implement Dondela Mini Hydel Project at Dondela by M/s. Sagar Power (Dandela) Private Limited – Orders relating to:

**Read:**
1. Government order No: DE 28 NCE 1996 (12) dated:24.7.1996.
2. Government order No: DE 188 NCE 2000 dated: 26.12.2000.
3. Government order No: DE 86 NCE 2002 dated: 28.8.2002.
4. Letter No. KRED / 06 / Dondela / 2005 / 1361dated 22/25.7.2005 received from the MD, KREDL,Bangalore

**PREAMBLE:**

In the Government Order dated 24.7.1996 read at (1) above, Sanction has been accorded to M/s. Sagar Power (Dandela) Private Limited to implement 10 M.W. Mini Hydel Power Project at Dondela, Dharmastala village, Belthangadi Taluk, Dakshina Kannada District.

In the Government Order read at (2) & (3) above, extension of time had been granted upto 27.8.2005 for implementation of the project. As the developer has executed power purchase agreement with KPTCL recently and hence the company needs atleast 27 months to commissioning the project from the date of power purchase agreement. Accordingly the Managing Director, Karnataka Renewable Energy Development Limited, Bangalore vide letter read at (4) above has recommended for extension of time limit from 27.8.2005 for a further period of three years.

The proposal has been examined at Government level and hence the following order:

**GOVERNMENT ORDER NO. EN 225 NCE 2005 BANGALORE, DATED 04th August 2005**

Government is pleased to extend the time to M/s. Sagar Power (Dandela) Private Limited for commissioning the 10 MW capacity Dondela Mini Hydel Project Dharmastala village, Belthangadi Taluk, Dakshina Kannada District, for a further period of three years from 27.8.2005.

The terms and conditions of the Government Order read at (1) above, shall **IPSO FACTO** applicable.

By Order and in the Name of the Governor of Karnataka.

PR-1138

**Suresh .B. Krishnappanavar,**
Under Secretary to Government,
Energy Department.

**Sub**: Transfer of 0.8 M.W. Wind Power Capacity in favour of M/s. Unnathi Projects Limited – Orders relating to:

**Read**:
1. Government order No: DE 26 NCE 1999 dated: 13.5.1999.
2. Government order No: EN 76 NCE 2005 dated: 18.3.2005.
3. Letter No. KRED/08/UPP/2005/1428 dated 27.7.2005 received from the MD, KREDL, Bangalore received from the MD, KREDL, Bangalore.

**PREAMBLE:**

In the Government Order dated 18.3.2005 read at (2) above, sanction has been accorded for implementation of 192 M.W. capacity Wind Power Project at Jogimatti Wind Zone, Chitradurga, District to M/s. Enercon India Ltd.

Now, the Managing Director, Karnataka Renewable Energy Development Limited, Bangalore in his letter dated 27.7.2005 read at (3) above, has recommended to the Government for transfer of 0.8 M.W. Wind Power capacity in favour of M/s. Unnathi Projects Limited at Lakkihalli village, Hiriyur Taluk, Chitradurga District from out of the sanctioned 192 M.W. capacity of M/s. Enercon India Limited.

The proposal has been examined and pass the following order:

**GOVERNMENT ORDER NO. EN 235 NCE 2005 BANGALORE, DATED 6th August 2005**

Government are pleased to accord sanction for transfer of 0.8 M.W. Wind Power capacity in favour of M/s. Unnathi Projects Limited at Lakkihalli village, Hiriyur Taluk, Chitradurga District from out of the sanctioned 192 M.W. capacity of M/s. Enercon India Ltd. allotted in Government Order EN 76 NCE 2005 dated 18.3.2005.

The terms and conditions of the Government Order read at (1) above, shall **IPSO FACTO** applicable.

By Order and in the Name of the Governor of Karnataka.

PR-1143

**Suresh .B. Krishnappanavar,**
Under Secretary to Government,
Energy Department.

**Sub:** Transfer of 0.8 M.W. Wind Power Capacity in favour of M/s. R.S.Suriya – Orders relating to:

**Read:** 1. Government order No: DE 26 NCE 1999 dated: 13.5.1999.
2. Government order No: EN 76 NCE 2005 dated: 18.3.2005.
3. Letter No. KRED/08/RSS/2005/1427 dated 27.7.2005 received from the MD, KREDL, Bangalore received from the MD, KREDL, Bangalore.

**PREAMBLE:**

In the Government Order dated 18.3.2005 read at (2) above, sanction has been accorded for implementation of 192 M.W. capacity Wind Power Project at Jogimatti Wind Zone, Chitradurga, District to M/s. Enercon India Ltd.

Now, the Managing Director, Karnataka Renewable Energy Development Limited, Bangalore in his letter dated 27.7.2005 read at (3) above, has recommended to the Government for transfer of 0.8 M.W. Wind Power capacity in favour of M/s. R.S.Suriya, at Lakkihalli village, Hiriyur Taluk, Chitradurga District from out of the sanctioned 192 M.W. capacity of M/s. Enercon India Limited.

The proposal has been examined and pass the following order:

**GOVERNMENT ORDER NO. EN 237 NCE 2005 BANGALORE, DATED 6th August 2005**

Government are pleased to accord sanction for transfer of 0.8 M.W. Wind Power capacity in favour of M/s R.S.Suriya at Lakkihalli village, Hiriyur Taluk, Chitradurga District from out of the sanctioned 192 M.W. capacity of M/s. Enercon India Ltd. allotted in Government Order EN 76 NCE 2005 dated 18.3.2005.

The terms and conditions of the Government Order read at (1) above, shall **IPSO FACTO** applicable.

By Order and in the Name of the Governor of Karnataka.

PR-1136

**Suresh .B. Krishnappanavar,**
Under Secretary to Government,
Energy Department.

**ಕಂದಾಯ ಸಚಿವಾಲಯ**

**ವಿಷಯ:** ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ದಿನಾಂಕ: 1–4–2000 ರಂದು ಖಾಲಿ ಇದ್ದ ಹುದ್ದೆಗಳ ಪೈಕಿ ಶೇಕಡ 80 ರಷ್ಟು ಹುದ್ದೆಗಳನ್ನು ರದ್ದು ಗೊಳಿಸುವ ಬಗ್ಗೆ– ಆದೇಶ.

**ಓದಲಾಗಿದೆ:** (1) ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ (ಕಾರ್ಯಾಧ್ಯಯನ) ನಡವಳಿ ಸಂಖ್ಯೆ : ಸಿಆಸುಇ 14 ಈಕಾಅ 2004 ದಿನಾಂಕ: 01–06–2005 ಮತ್ತು ತಿದ್ದುಪಡಿ ದಿನಾಂಕ: 09–08–2005.
(2) ಸರ್ಕಾರದ ಸಮ ಸಂಖ್ಯೆಯ ಪತ್ರ ದಿನಾಂಕ: 5–7–2005
(3) ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಪತ್ರ ಸಂಖ್ಯೆ: ಸಿಬ್ಬಂದಿ(2)–108/2004–05 ದಿನಾಂಕ: 25–7–2005.

**ಪ್ರಸ್ತಾವನೆ:**

2000–01 ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಸನ್ಮಾನ್ಯ ಮುಖ್ಯಮಂತ್ರಿಗಳು ಪ್ರಸ್ತಾಪಿಸಿದಂತೆ ಸರ್ಕಾರದ ವಿವಿಧ ಇಲಾಖೆಗಳಲ್ಲಿ ದಿನಾಂಕ: 1–4–2000 ದಂದು ಖಾಲಿಯಿರುವ ಹುದ್ದೆಗಳಲ್ಲಿ ಶೇಕಡ 80 ರಷ್ಟು ಹುದ್ದೆಗಳನ್ನು ರದ್ದುಗೊಳಿಸುವ ಬಗ್ಗೆ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಕೆಲವು ಸದಸ್ಯರುಗಳನ್ನೊಳಗೊಂಡ ಒಂದು ಅಧಿಕಾರಯುತ ಸಮಿತಿಯು ರಚಿತಗೊಂಡಿದ್ದು, ಮೇಲ್ಕಂಡ ಸಮಿತಿಯು ದಿನಾಂಕ: 28–8–2002 ರಿಂದ ಈಚೆಗೆ ಸಾಕಷ್ಟು ಸಭೆಗಳಲ್ಲಿ ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ಖಾಲಿಯಿರುವ ಹುದ್ದೆಗಳನ್ನು ರದ್ದುಗೊಳಿಸುವ ಬಗ್ಗೆ ಚರ್ಚಿಸಿರುತ್ತದೆ. ಅಂತಿಮವಾಗಿ ದಿನಾಂಕ: 22–2–2005 ಮತ್ತು 25–4–2005 ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಏರ್ಪಡಿಸಲಾಗಿದ್ದ ಅಧಿಕಾರಯುತ ಸಮಿತಿ ಸಭೆಯಲ್ಲಿ ನೋಂದಣಿ ಮತ್ತು ಮುದ್ರಾಂಕ ಇಲಾಖೆಗೆ ಮಂಜೂರಾದ, ಭರ್ತಿಯಾದ ಹಾಗೂ ಖಾಲಿಯಿರುವ ಹುದ್ದೆಗಳ ವಿವರಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಇಲಾಖೆಯಲ್ಲಿ ದಿನಾಂಕ: 1–4–2000 ರಂದು ಖಾಲಿ ಇದ್ದ ಹುದ್ದೆಗಳ ಪೈಕಿ ಈ ಕೆಳಕಂಡ ಹುದ್ದೆಗಳನ್ನು ಮಾತ್ರ ರದ್ದು ಪಡಿಸುವಂತೆ ಮೇಲೆ ಓದಲಾದ 1 ರ ಸರ್ಕಾರದ ನಡವಳಿಯಲ್ಲಿ ಸೂಚಿಸಿದೆ.

| | | |
|---|---|---|
| 1 | ಶೀಘ್ರಲಿಪಿಗಾರರ ವೃಂದದಲ್ಲಿ | 6 |
| 2 | ಬೆರಳಚ್ಚುಗಾರರ ವೃಂದದಲ್ಲಿ | 5 |
| 3 | ವಾಹನ ಚಾಲಕರ ವೃಂದದಲ್ಲಿ | 10 |
| 4 | ಜವಾನರು/ ಅಟೆಂಡರ್ ವೃಂದದಲ್ಲಿ | 4 |
| 5 | ಅಟೆಂಡರ್ಸ್ ವೃಂದದಲ್ಲಿ | 10 |
| | ಒಟ್ಟು | 35 |

ತತ್ಸಂಬಂಧ ಮೇಲೆ 2 ರಲ್ಲಿ ಓದಲಾದ ಸರ್ಕಾರದ ಸಮ ಸಂಖ್ಯೆಯ ಪತ್ರದಲ್ಲಿ ಮೇಲೆ 1 ರಲ್ಲಿ ಓದಲಾದ ನಡವಳಿಯಲ್ಲಿ ಸೂಚಿಸಿರುವ ಹುದ್ದೆಗಳ ರದ್ದತಿಗೆ ಸಂಬಂಧಿಸಿದಂತೆ ಯಾವ ಯಾವ ಕಛೇರಿಗಳಲ್ಲಿನ ಹುದ್ದೆಗಳನ್ನು ರದ್ದುಗೊಳಿಸಬಹುದು ಎಂಬುದನ್ನು ಗುರುತಿಸಿ ವಿವರಗಳನ್ನು ಒದಗಿಸುವಂತೆ ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ರವರನ್ನು ಕೋರಲಾಗಿತ್ತು.

ಮೇಲೆ ಓದಲಾದ 3 ರ ಪತ್ರದಲ್ಲಿ ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರು ಸರ್ಕಾರಕ್ಕೆ ಸಲ್ಲಿಸಿರುವ ಪ್ರಸ್ತಾವನೆಯಲ್ಲಿ ಈ ಕೆಳಕಂಡ ಕಛೇರಿಗಳಲ್ಲಿನ ಮುಂದೆ ತೋರಿಸಲಾಗಿರುವ ವೃಂದದ ಹುದ್ದೆಗಳನ್ನು ರದ್ದುಗೊಳಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

**ಶೀಘ್ರಲಿಪಿಗಾರರು:**

| ಕ್ರಮ ಸಂ. | ಕಛೇರಿ ಹೆಸರು | ರದ್ದುಪಡಿಸಬೇಕಾದ ಹುದ್ದೆಗಳು |
|---|---|---|
| 1 | ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರ ಕಛೇರಿ, ಬೆಂಗಳೂರು. | 1 |
| 2 | ಜಿಲ್ಲಾ ನೋಂದಣಿ ಕಛೇರಿ, ದಾವಣಗೆರೆ | 1 |
| 3 | ಜಿಲ್ಲಾ ನೋಂದಣಿ ಕಛೇರಿ, ಗದಗ | 1 |
| 4 | ಜಿಲ್ಲಾ ನೋಂದಣಿ ಕಛೇರಿ, ಹಾವೇರಿ | 1 |
| 5 | ಜಿಲ್ಲಾ ನೋಂದಣಿ ಕಛೇರಿ, ಕೊಪ್ಪಳ | 1 |
| 6 | ಜಿಲ್ಲಾ ನೋಂದಣಿ ಕಛೇರಿ, (DUS) ಜಯನಗರ | 1 |
| | ಒಟ್ಟು | 6 |

**ಬೆರಳಚ್ಚುಗಾರರು:**

| ಕ್ರಮ ಸಂ. | ಕಛೇರಿ ಹೆಸರು | ರದ್ದುಪಡಿಸಬೇಕಾದ ಹುದ್ದೆಗಳು |
|---|---|---|
| 1 | ಉಪ ನೋಂದಣಿ ಕಛೇರಿ, ಶ್ರೀರಾಮಪುರ | 1 |
| 2 | ಜಿಲ್ಲಾ ನೋಂದಣಿ ಕಛೇರಿ, ಬಳ್ಳಾರಿ | 1 |
| 3 | ಜಿಲ್ಲಾ ನೋಂದಣಿ ಕಛೇರಿ, ಮಂಡ್ಯ | 1 |
| 4 | ಜಿಲ್ಲಾ ನೋಂದಣಿ ಕಛೇರಿ, ರಾಯಚೂರು | 1 |
| 5 | ಜಿಲ್ಲಾ ನೋಂದಣಿ ಕಛೇರಿ, ಶಿವಮೊಗ್ಗ | 1 |
| | ಒಟ್ಟು | 5 |

**ವಾಹನ ಚಾಲಕರು :**

| ಕ್ರಮ ಸಂ. | ಕಛೇರಿ ಹೆಸರು | ರದ್ದುಪಡಿಸಬೇಕಾದ ಹುದ್ದೆಗಳು |
|---|---|---|
| 1 | ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರ ಕಛೇರಿ, ಬೆಂಗಳೂರು. | 2 |
| 2 | ಜಿಲ್ಲಾ ನೋಂದಣಿ ಕಛೇರಿ, ಚಿತ್ರದುರ್ಗ | 1 |
| 3 | ಜಿಲ್ಲಾ ನೋಂದಣಿ ಕಛೇರಿ, ಬಳ್ಳಾರಿ | 1 |
| 4 | ಜಿಲ್ಲಾ ನೋಂದಣಿ ಕಛೇರಿ, ಕಾರವಾರ | 1 |
| 5 | ಜಿಲ್ಲಾ ನೋಂದಣಿ ಕಛೇರಿ, ದಕ್ಷಿಣ ಕನ್ನಡ | 1 |
| 6 | ಜಿಲ್ಲಾ ನೋಂದಣಿ ಕಛೇರಿ, ಚಾಮರಾಜನಗರ | 1 |
| 7 | ಜಿಲ್ಲಾ ನೋಂದಣಿ ಕಛೇರಿ, ಹಾವೇರಿ | 1 |
| 8 | ಜಿಲ್ಲಾ ನೋಂದಣಿ ಕಛೇರಿ, ಉಡುಪಿ | 1 |
| 7 | ಜಿಲ್ಲಾ ನೋಂದಣಿ ಕಛೇರಿ, (DUS) ಶಿವಾಜಿನಗರ | 1 |
| | ಒಟ್ಟು | 10 |

**ಜವಾನರು/ಅಟೆಂಡರ್ :**

| ಕ್ರಮ ಸಂ. | ಕಛೇರಿ ಹೆಸರು | ರದ್ದುಪಡಿಸಬೇಕಾದ ಹುದ್ದೆಗಳು |
|---|---|---|
| 1 | ಉಪ ನೋಂದಣಿ ಕಛೇರಿ, ಕನಕಪುರ | 1 |
| 2 | ಉಪ ನೋಂದಣಿ ಕಛೇರಿ, ಮಾಗಡಿ | 1 |
| 3 | ಉಪ ನೋಂದಣಿ ಕಛೇರಿ, ದೊಡ್ಡಬಳ್ಳಾಪುರ | 1 |
| 4 | ಉಪ ನೋಂದಣಿ ಕಛೇರಿ, ಚನ್ನಪಟ್ಟಣ | 1 |
| | ಒಟ್ಟು | 4 |

ಅಟೆಂಡರ್ :

| ಕ್ರಮ ಸಂ. | ಕಛೇರಿ ಹೆಸರು | ರದ್ದುಪಡಿಸಬೇಕಾದ ಹುದ್ದೆಗಳು |
|---|---|---|
| 1 | ಉಪ ನೋಂದಣಿ ಕಛೇರಿ, ಚಿಕ್ಕಬಳ್ಳಾಪುರ | 1 |
| 2 | ಉಪ ನೋಂದಣಿ ಕಛೇರಿ, ಮುಳಬಾಗಿಲು | 1 |
| 3 | ಉಪ ನೋಂದಣಿ ಕಛೇರಿ, ಚಿಂತಾಮಣಿ | 1 |
| 4 | ಉಪ ನೋಂದಣಿ ಕಛೇರಿ, ಕೂಡ್ಲಿಗಿ | 1 |
| 5 | ಉಪ ನೋಂದಣಿ ಕಛೇರಿ, ಹೊಸಪೇಟೆ | 1 |
| 6 | ಉಪ ನೋಂದಣಿ ಕಛೇರಿ, ಕಾರವಾರ | 1 |
| 7 | ಉಪ ನೋಂದಣಿ ಕಛೇರಿ, ಚನ್ನರಾಯಪಟ್ಟಣ | 1 |
| 8 | ಉಪ ನೋಂದಣಿ ಕಛೇರಿ, ಬೇಲೂರು | 1 |
| 9 | ಉಪ ನೋಂದಣಿ ಕಛೇರಿ, ರಾಯಚೂರು | 1 |
| 10 | ಉಪ ನೋಂದಣಿ ಕಛೇರಿ, ಬೈಲಹೊಂಗಲ | 1 |
| | **ಒಟ್ಟು** | 10 |

ಮೇಲೆ ಓದಲಾದ-3 ರಲ್ಲಿನ ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 12 ಮುನೋಸೇ(3) 2004, ಬೆಂಗಳೂರು, ದಿನಾಂಕ: 11ನೇ ಆಗಸ್ಟ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ನೊಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ದಿನಾಂಕ: 01-04-2000 ರಂದು ಖಾಲಿ ಇದ್ದ ಹುದ್ದೆಗಳ ಪೈಕಿ ಪ್ರಸ್ತಾವನೆಯಲ್ಲಿ ತಿಳಿಸಿರುವಂತೆ ಶೀಘ್ರಲಿಪಿಗಾರರ ವೃಂದದಲ್ಲಿ - 6, ಬೆರಳಚ್ಚುಗಾರರ ವೃಂದದಲ್ಲಿ - 5, ವಾಹನ ಚಾಲಕರ ವೃಂದದಲ್ಲಿ - 10, ಜವಾನರ/ಅಟೆಂಡರ್ಸ್ ವೃಂದದಲ್ಲಿ - 4, ಅಟೆಂಡರ್ಸ್ ವೃಂದದಲ್ಲಿ - 10 ಒಟ್ಟು 35 (ಮೂವತ್ತೈದು) ಹುದ್ದೆಗಳನ್ನು ಈ ತಕ್ಷಣದಿಂದ ಜಾರಿಗೆಬರುವಂತೆ ರದ್ದುಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1148

**ಎಂ.ಪಿ. ಮಂಜುನಾಥ್**
ಪೀಠಾಧಿಕಾರಿ,
ಕಂದಾಯ ಇಲಾಖೆ,
(ನೋಂದಣಿ ಮತ್ತು ಮುದ್ರಾಂಕ)

## ENERGY SECRETARIAT

**Subject:** Karnataka Electricity Regulatory Commission - Release of First Quarter Fund to KERC out of the provision made in the Budget Estimates for the year 2005-06 - Orders reg.

**Read:** Letter No. F/01/1/837 dated 9.6.2005.

**PREAMBLE:**

A sum of Rs. 206.00 lakhs has been provided in the Budget estimates for the Financial year 2005-06 under the Head of Account 2801-80-101-1-07-KERC-101-GIA (Non-Plan). In the letter dated 9.6.2005 read above, Secretary, KERC has requested to recoup the Permanent Imprest by releasing Rs. 57.29 lakhs to meet the expenditures in the First quarter of the year 2005-2006 (based on actual expenditure) in order to maintain the balance of Rs. 75 lakhs in the Permanent Imprest Account sanctioned vide G.O. dated 19.10.2002. Hence, this order.

**GOVERNMENT ORDER NO. DE 30 PSR 2001, BANGALORE, DATED 9th August 2005**

In the circumstances explained in the preamble, Government are pleased to release, the amount of Rs. 57.29 lakhs (Rupees Fifty Seven Lakhs Twenty Nine Thousand Only) based on the actual expenditure incurred by the Karnataka Electricity Regulatory Commission (KERC) under the Head of Account **"2801-80-101-1-07-KERC-101-GIA (Non-Plan)"** to meet the expenditure for the First (I) Quarter of the year 2005-06 and to maintain the balance of Rs. 75.00 lakhs in the Permanent Imprest Account.

The Principal Secretary to Government, Energy Department is authorised to countersign the bill and to draw and disburse the amount to KERC on the payees receipt signed and submitted by the Secretary, KERC.

This Order issues with the concurrence of the Finance Department vide their U.O. Note No. FD/1215/Exp-1/2005 dated 18.07.2005.

By Order and in the Name of the Governor of Karnataka.

PR-1160

**Suresh .B. Krishnappanavar,**
Under Secretary to Government,
Energy Department.

**ಲೋಕೋಪಯೋಗಿ ಸಚಿವಾಲಯ**

**ವಿಷಯ:** ಶ್ರೀ ವೀರಬಸವಂತರಾಯ, ತಂದೆ ಸೂಗಣ್ಣ ಸೂಗಾರೆಡ್ಡಿ, ಪದವೀಧರ ಇಂಜಿನಿಯರ್ (ಎಂ.ಆರ್.ಇ) ಇವರ ಸೇವೆಯನ್ನು ಸಕ್ರಮಗೊಳಿಸುವ ಬಗ್ಗೆ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 86 ಪಿಡಬ್ಲ್ಯುಸಿ 2002, ಬೆಂಗಳೂರು ದಿ: 12ನೇ ಆಗಸ್ಟ್ 2005**

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ:13:ಎಸ್‌ಎಲ್‌ಸಿ:94 ದಿನಾಂಕ 29.9.94
2. ಸರ್ಕಾರದ ಆದೇಶ ಸಂಖ್ಯೆ: ಪಿಡಬ್ಲ್ಯುಡಿ 357 ಪಿಡಬ್ಲ್ಯುಸಿ 90 ದಿನಾಂಕಃ 2.12.94
3. ಸರ್ಕಾರದ ಪತ್ರ ಸಂಖ್ಯೆ:ಪಿಡಬ್ಲ್ಯುಡಿ 201 ಪಿಡಬ್ಲ್ಯುಸಿ 95, ದಿನಾಂಕಃ 2.7.94, 1.9.95 ಮತ್ತು 13.9.95.
4. ಲೋಇ 20 ಪಿಡಬ್ಲ್ಯೂಸಿ 98, ದಿನಾಂಕ 20.6.1998.
5. ಮುಖ್ಯ ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಮುಇಂ:ಗ್ರಇಂಇ: ಸಿ–14(ಎ):ಮಾವೇಸಿ:ಸಕ್ರಮ: 2002–03/4883 ದಿನಾಂಕ 24.10.2002.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಆದೇಶದಲ್ಲಿ ಸರ್ವೋಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ: 737:90, 738:90, 1038:90 ಮತ್ತು 297:91 ರಲ್ಲಿ ನೀಡಿರುವ ಆದೇಶದನ್ವಯ ದಿನಾಂಕ 1.7.84ರ ನಂತರ ಹಾಗೂ 15.10.92ಕ್ಕೆ ಮೊದಲು ದಿನಗೂಲಿಯಲ್ಲಿ ನೇಮಕ ಹೊಂದಿದ ಪದವೀಧರ ಮತ್ತು ಡಿಪ್ಲೋಮಾ ಇಂಜಿನಿಯರ್‌ರನ್ನು ಹಲವು ಷರತ್ತುಗಳಿಗೆ ಒಳಪಟ್ಟಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಲು ಆದೇಶಿಸಿದೆ.

ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ಸಿ.ಆ.ಸು.ಇಲಾಖೆಯ ಆದೇಶಾನುಸಾರ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳಲ್ಲಿ ದಿನಾಂಕ 1.7.84ರ ನಂತರ 15.10.92ಕ್ಕೆ ಮುಂಚೆ ನೇಮಕ ಹೊಂದಿದ ಪದವೀಧರ ಹಾಗೂ ಡಿಪ್ಲೋಮಾ ಇಂಜಿನಿಯರ್‌ರನ್ನು ದಿನಾಂಕ 29.9.94ರಿಂದ ಜಾರಿಗೆ ಬರುವಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಿ ಆದೇಶವನ್ನು ಹೊರಡಿಸಲಾಗಿದೆ. ದಿನಾಂಕ 29.9.94ರ ಆದೇಶದಲ್ಲಿನ ಕಂಡಿಕೆ 6 ಮತ್ತು 7 ರಲ್ಲಿ ದಿನಗೂಲಿ ಸೇವೆಯಲ್ಲಿ 10 ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸಲು ಸಹ ಆದೇಶಿಸಲಾಗಿದೆ. ಪದವೀಧರ ಇಂಜಿನಿಯರ್‌ರಿಗೆ ಸಂಬಂಧಿಸಿದಂತೆ ಸರ್ಕಾರದ ವತಿಯಿಂದಲೂ ಹಾಗೂ ಡಿಪ್ಲೋಮಾ ಇಂಜಿನಿಯರ್‌ರಿಗೆ ಸಂಬಂಧಿಸಿದಂತೆ ಆಯಾ ಮುಖ್ಯ ಇಂಜಿನಿಯರ್‌ರವರು ಸೂಕ್ತ ಕ್ರಮ ತೆಗೆದುಕೊಳ್ಳುವಂತೆ ನಿರ್ದೇಶಿಸಲಾಗಿದೆ.

ಕ್ರಮ ಸಂಖ್ಯೆ: (3) ರಲ್ಲಿ ಓದಲಾದ ಪತ್ರಗಳಲ್ಲಿ ಹತ್ತು ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸುವ ಸಲುವಾಗಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳ ಎಲ್ಲಾ ಮುಖ್ಯ ಇಂಜಿನಿಯರ್‌ಗಳನ್ನು ಕೋರಲಾಗಿದೆ.

ಅದರಂತೆ ಕ್ರಮ ಸಂಖ್ಯೆ: (5) ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರಿಂದ ಸ್ವೀಕೃತವಾದ ಪ್ರಸ್ತಾವನೆಯನ್ನು ಪರಿಶೀಲಿಸಿ ಸಿ.ಆ.ಸು.ಇಲಾಖೆಯ ಸಂಖ್ಯೆ: ಡಿಪಿಎಆರ್:13:ಎಸ್‌ಎಲ್‌ಸಿ 94 ದಿನಾಂಕ 29.9.94 ಹಾಗೂ ಪಿಡಬ್ಲ್ಯೂಡಿ 357 ಪಿಡಬ್ಲ್ಯೂಸಿ 90 ದಿನಾಂಕ 2.12.94ರ ಆದೇಶದನ್ವಯ ಮಾಸಿಕ ವೇತನದಡಿಯಲ್ಲಿ ಕೆಲಸ ಮಾಡುತ್ತಿರುವ ಪದವೀಧರ ಇಂಜಿನಿಯರ್‌ರನ್ನು ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲು ನಿರ್ಧರಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಆ ದೇ ಶ**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಲೋಕೋಪಯೋಗಿ ಇಲಾಖೆಗಳಲ್ಲಿ ದಿನಾಂಕ 1.7.84ರ ನಂತರ ಹಾಗೂ 15.10.92ಕ್ಕೆ ಮುಂಚೆ ದಿನಗೂಲಿ ಆಧಾರದ ಮೇಲೆ ನೇಮಕಗೊಂಡು ಮಾಸಿಕ ವೇತನ ವ್ಯವಸ್ಥೆಯಡಿಯಲ್ಲಿ ಕೆಲಸ ನಿರ್ವಹಿಸುತ್ತಿರುವ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ:13:ಎಸ್‌ಎಲ್‌ಸಿ:94 ದಿನಾಂಕ 29.9.94ರ ಆದೇಶಗಳಲ್ಲಿ ವಿಧಿಸಿರುವ ಷರತ್ತುಗಳನ್ನು ಪೂರೈಸಿದ ಈ ಕೆಳಕಂಡ ಪದವೀಧರ ಇಂಜಿನಿಯರ್‌ರನ್ನು ಅವರ ಮುಂದೆ ಸೂಚಿಸಲಾಗಿರುವ ದಿನಾಂಕ ಅಂದರೆ 10.9.2003ರಿಂದ ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲಾಗಿದೆ.

| ಕ್ರ ಸಂ. | ಹೆಸರು ಶ್ರೀಯುತರು | ದಿನ ಗೂಲಿಗೆ ಸೇರಿದ ದಿನಾಂಕ | ಬಿ.ಇ. ಪಾಸು ಮಾಡಿದ ದಿನಾಂಕ | 10 ವರ್ಷ ಸೇವೆ ಪೂರೈಸುವ ದಿನಾಂಕ | ಕ್ರಮಬದ್ಧ ಗೊಳ್ಳುವ ದಿನಾಂಕ | ಕಾರ್ಯ ನಿರ್ವಹಿ ಸುತ್ತಿರುವ ಸ್ಥಳ |
|---|---|---|---|---|---|---|
| 1. | ವೀರಬಸವಂತರಾಯ, ತಂದೆ ಸೂಗಣ್ಣ ಸೂಗಾರೆಡ್ಡಿ, ಪದವೀಧರ ಇಂಜಿನಿಯರ್ | 16.5.91 | ಡಿಸೆಂಬರ್ 1988 | 9.9.2003 (ಡೈಸ್–ನಾನ್ ಅವಧಿಯನ್ನು ಹೊರತುಪಡಿಸಿದೆ) | 10.9.03 | ಜಿ.ಪಂ.ಇಂ. ಉಪ ವಿಭಾಗ, ಶಹಾಪುರ |

ಸಕ್ರಮ ಸೇವೆಯಲ್ಲಿ ವಿಲೀನಗೊಂಡ ನಂತರ ಮೇಲ್ಕಂಡ ಸಹಾಯಕ ಇಂಜಿನಿಯರ್‌ರನ್ನು ಮುಖ್ಯ ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರ ವಶಕ್ಕೆ ನೀಡಿ ಮುಂದಿನ ಸ್ಥಳ ನಿಯುಕ್ತಿ ಆದೇಶ ನೀಡಲು ಕ್ರಮ ತೆಗೆದುಕೊಳ್ಳುವಂತೆ ಆದೇಶಿಸಿದೆ. ಇವರು ಮುಖ್ಯ ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರಲ್ಲಿ ಕಾರ್ಯವರದಿ ಮಾಡುವುದು.

ಈ ಆದೇಶವನ್ನು ಸಿಆಸುಇ:13:ಎಸ್‌ಎಲ್‌ಸಿ:94 ದಿನಾಂಕ 29.9.94ರ ಆದೇಶದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1172

**ಎಸ್. ಚಂದ್ರಶೇಖರಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಲೋಕೋಪಯೋಗಿ ಇಲಾಖೆ(ಸೇವೆಗಳು-ಸಿ)

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:-** ನಗರ ಸ್ತ್ರೀಶಕ್ತಿ ಯೋಜನೆ ಕರಡು ಮಾರ್ಗಸೂಚಿಗಳಿಗೆ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:-** 1] ಸರ್ಕಾರದ ಆದೇಶ ಸಂಖ್ಯೆ:ಮಮಇ/141:ಮಮಅ:2000, ದಿನಾಂಕ:25-08-2000

2] ಸರ್ಕಾರದ ಆದೇಶ ಸಂಖ್ಯೆ:ಮಮಇ/19:ಮಅನಿ:2003, ದಿನಾಂಕ:25-11-2003

3] ಸರ್ಕಾರದ ಆದೇಶ ಸಂಖ್ಯೆ:ಮಮಇ/54:ಮಅನಿ:2004, ದಿನಾಂಕ:19-07-2004

4] ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ಇವರ ಪತ್ರಸಂಖ್ಯೆ/ಮಅನಿ/ನಸ್ತ್ರೀಯೋ/1/03-04/278, ದಿನಾಂಕ.08-04-2005

**ಪ್ರಸ್ತಾವನೆ:-**

ಮೇಲೆ ಓದಲಾದ ಕ್ರಮ ಸಂಖ್ಯೆ [1]ರ ಸರ್ಕಾರದ ಆದೇಶದಲ್ಲಿ ಮಹಿಳೆಯರನ್ನು ಆಧಾಯೋತ್ಪನ್ನ ಚಟುವಟಿಕೆಗಳಲ್ಲಿ ತೊಡಗಿಸಿ ಗ್ರಾಮೀಣ ಮಹಿಳೆಯರನ್ನು ಸಶಕ್ತಗೊಳಿಸಲು 2000-01ನೇ ಸಾಲಿನಲ್ಲಿ ರಾಜ್ಯವಲಯ ಯೋಜನೆಯಡಿ ಸ್ತ್ರೀಶಕ್ತಿ ಯೋಜನೆಯನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸುವುದನ್ನು ಪರಿಶೀಲಿಸಲು ರಾಜ್ಯ ಮಟ್ಟದಲ್ಲಿ ಮಾನ್ಯ ಮುಖ್ಯ ಮಂತ್ರಿಯವರ ಅಧ್ಯಕ್ಷತೆಯಲ್ಲಿ ಹಾಗೂ ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಹಾಗೂ ತಾಲ್ಲೂಕು ಮಟ್ಟದಲ್ಲಿ ಕಾರ್ಯನಿರ್ವಹಣಾಧಿಕಾರಿ, ತಾಲ್ಲೂಕ್ ಪಂಚಾಯತ್ ಇವರ ಅಧ್ಯಕ್ಷತೆಯಲ್ಲಿ ಮೂರು ಚಾಲನಾ ಸಮಿತಿಗಳನ್ನು ರಚಿಸಲಾಗಿದೆ. ಮೇಲೆ ಓದಲಾದ ಕ್ರಮಸಂಖ್ಯೆ[2]ರ ಸರ್ಕಾರದ ಆದೇಶದಲ್ಲಿ ರಾಜ್ಯದ ನಗರ ಮತ್ತು ಪಟ್ಟಣ ಪ್ರದೇಶದ ಅಂಗವಿಕಲ ಮಹಿಳೆಯರು ಹಾಗೂ ಪಟ್ಟಣ ಮತ್ತು ನಗರ ಪ್ರದೇಶದಲ್ಲಿ ಸಣ್ಣ ವ್ಯಾಪಾರ ಮಾಡುತ್ತಿರುವ ಮಹಿಳೆಯರನ್ನೊಳಗೊಂಡ ಒಟ್ಟು 5,000 ನಗರ ಸ್ತ್ರೀಶಕ್ತಿ ಗುಂಪುಗಳನ್ನು ರಚಿಸಿ ಸದರಿ ನಗರ ಸ್ತ್ರೀಶಕ್ತಿ ಗುಂಪುಗಳಿಗೆ ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮವು ಸುತ್ತುನಿಧಿಯನ್ನು ನೀಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ. ಮೇಲೆ ಓದಲಾದ ಕ್ರಮಸಂಖ್ಯೆ [3] ಸರ್ಕಾರದ ಆದೇಶದಲ್ಲಿ ಗ್ರಾಮೀಣ ಪ್ರದೇಶದ ಸ್ತ್ರೀಶಕ್ತಿ ಯೋಜನೆಯಡಿ ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ರಾಜ್ಯ ಮಟ್ಟದಲ್ಲಿ ಜಿಲ್ಲಾ ಮಟ್ಟದಲ್ಲಿ ಹಾಗೂ ತಾಲ್ಲೂಕು ಮಟ್ಟದಲ್ಲಿ ಮೂರು ಚಾಲನಾ ಸಮಿತಿಗಳನ್ನು ರಚಿಸಲಾಗಿದ್ದು, ನಗರ ಸ್ತ್ರೀಶಕ್ತಿ ಯೋಜನೆ ಪರಿಣಾಮಕಾರಿ ಅನುಷ್ಟಾನಕ್ಕಾಗಿ ಈ ಯೋಜನೆಯನ್ನು ಸಹ ದಿನಾಂಕ/23-08-2000ರ ಆದೇಶದ ರೀತ್ಯಾ ರಚಿಸಲಾದ ಈ ಚಾಲನಾ ಸಮಿತಿಗಳ ವ್ಯಾಪ್ತಿಗೆ ಒಳಪಡಿಸಲಾಗಿದೆ. ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ಮೇಲೆ ಓದಲಾದ ಕ್ರಮಸಂಖ್ಯೆ[4]ರ ಪತ್ರದಲ್ಲಿ ನಗರ ಸ್ತ್ರೀಶಕ್ತಿ ಯೋಜನೆ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಕರಡು ಮಾರ್ಗಸೂಚಿಗಳನ್ನು ಸರ್ಕಾರಕ್ಕೆ ಸಲ್ಲಿಸಿದ್ದು ಅನುಮೋದನೆ ನೀಡುವಂತೆ ಕೋರಿರುತ್ತಾರೆ.

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ಇವರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ/39/ಮಅನಿ/2005, ಬೆಂಗಳೂರು, ದಿನಾಂಕ: 19ನೇ ಜುಲೈ 2005**

ನಗರ ಸ್ತ್ರೀಶಕ್ತಿ ಯೋಜನೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಈ ಆದೇಶದ ಅನುಬಂಧದ ಪ್ರಕಾರ ಮಾರ್ಗಸೂಚಿಗಳನ್ನು ರಚಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್.ಎಂ. ಚಂದ್ರಮ್ಮ,**

ಸರ್ಕಾರದ ಅಧೀನ ಕಾರ್ಯದರ್ಶಿ

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ/39/ಮಅನಿ/2005, ಬೆಂಗಳೂರು, ದಿನಾಂಕ: 19ನೇ ಜುಲೈ 2005ಕ್ಕೆ ಅನುಬಂಧ**

**1. ನಗರ ಸ್ತ್ರೀಶಕ್ತಿ ಯೋಜನೆಯ ಉದ್ದೇಶ:**

1. ಮಹಿಳೆಯರಿಗೆ ಆರ್ಥಿಕ ಪ್ರಗತಿಯನ್ನು ಸಾಧಿಸುವಂತಹ ಹಾಗೂ ಸಾಮಾಜಿಕ ಬದಲಾವಣೆ ಸೂಕ್ತ ವಾತಾವರಣವನ್ನು ಮೂಡಿಸುವಂತಹ ಪ್ರಕ್ರಿಯೆಯನ್ನು ಬಲಪಡಿಸುವುದು.
2. ರಾಜ್ಯಾದ್ಯಂತ 2003-04ನೇ ಸಾಲಿನಿಂದ ಒಂದು ಲಕ್ಷ ರಾಜ್ಯದ ನಗರ ಮತ್ತು ಪಟ್ಟಣ ಪ್ರದೇಶಗಳ ಅಂಗವಿಕಲ ಮಹಿಳೆಯರು, ಪಟ್ಟಣ ಮತ್ತು ನಗರ ಪ್ರದೇಶಗಳಲ್ಲಿ ಸಣ್ಣ ವ್ಯಾಪಾರ ಮಾಡುತ್ತಿರುವ ಮಹಿಳೆಯರನ್ನೊಳಗೊಂಡ 5,000 ನಗರ ಸ್ತ್ರೀಶಕ್ತಿ ಗುಂಪುಗಳನ್ನು ರಚಿಸುವುದು ಹಾಗೂ ಅವರಲ್ಲಿ ಸ್ವಾವಲಂಬನೆ ಮೂಡಿಸಿ ಸಂಪನ್ಮೂಲಗಳ ಮೇಲೆ ಹತೋಟಿ ಹಾಗೂ ಸಾಮೀಪ್ಯವನ್ನು ಸಾಧಿಸುವುದರ ಜೊತೆಗೆ ಅವರಲ್ಲಿ ಆತ್ಮವಿಶ್ವಾಸವನ್ನು ಹೆಚ್ಚಿಸುವುದು.
3. ಸಣ್ಣ ವ್ಯಾಪಾರದಲ್ಲಿ ಮಹಿಳೆಯರನ್ನು ತೊಡಗಿಸುವುದರ ಮೂಲಕ ನಗರ ಮತ್ತು ಪಟ್ಟಣ ಪ್ರದೇಶಗಳ ಮಹಿಳೆಯ ಆದಾಯವನ್ನು ಹೆಚ್ಚಿಸಿ ಅವರಲ್ಲಿ ಆರ್ಥಿಕ ಸ್ಥಿರತೆಯನ್ನು ಮಾಡಿಸುವುದು ತನ್ಮೂಲಕ ಬಡತನ ನಿವಾರಣೆ ಮಾಡುವುದು.
4. ವಿವಿಧ ಇಲಾಖೆಗಳ ಸೇವೆಗಳನ್ನು ಒಮ್ಮುಖಗೊಳಿಸುವುದರ ಮೂಲಕ ಸ್ವಸಹಾಯ ಗುಂಪಿನ ಸದಸ್ಯರುಗಳಿಗೆ ಇಲಾಖೆಗಳ ಅಭಿವೃದ್ಧಿ ಕಾರ್ಯಕ್ರಮಗಳ ಫಲ ಪಡೆಯುವಂತೆ ಅವಕಾಶ ಕಲ್ಪಿಸುವುದು ಹಾಗೂ ಸಾಲ ನೀಡುವಂತಹ ಸಂಸ್ಥೆಗಳಿಗೆ ಸಾಮೀಪ್ಯ ಒದಗಿಸುವುದರ ಜೊತೆಗೆ ಸಾಲ ದೊರೆಯುವಂತೆ ಕ್ರಮ ಕೈಗೊಳ್ಳುವುದು.

**2. ಯೋಜನೆಯ ವ್ಯಾಪ್ತಿ:**

ರಾಜ್ಯದ ಎಲ್ಲಾ ನಗರ ಮತ್ತು ಪಟ್ಟಣಗಳ ವ್ಯಾಪ್ತಿಯಲ್ಲಿ ಈ ಯೋಜನೆಯನ್ನು ಅನುಷ್ಠಾನಗೊಳಿಸುವುದು. 2003–04ನೇ ಸಾಲಿನಿಂದ ಒಂದು ಲಕ್ಷ ಮಹಿಳೆಯರನ್ನು 5,000 ನಗರ ಸ್ತ್ರೀಶಕ್ತಿ ಗುಂಪುಗಳ ಮೂಲಕ ಸಂಘಟಿಸುವುದು.

**3. ಯೋಜನೆಯ ರೂಪು ರೇಷೆಗಳು:**

1. ರಾಜ್ಯದ ಪ್ರತಿಯೊಂದು ಪಟ್ಟಣ ಮತ್ತು ನಗರ ಪ್ರದೇಶಗಳಲ್ಲಿ ಅಂಗನವಾಡಿ ಕಾರ್ಯಕರ್ತೆಯರ ಮೂಲಕ ನಗರ ಸ್ತ್ರೀಶಕ್ತಿ ಸ್ವಸಹಾಯ ಗುಂಪುಗಳನ್ನು ರಚಿಸುವುದು.
2. ಪ್ರತಿಯೊಂದು ಗುಂಪಿನಲ್ಲಿ ಸರಾಸರಿ 15–20 ಮಹಿಳೆಯರು ಇರುವಂತೆ ರಾಜ್ಯದ ಎಲ್ಲಾ ನಗರ ಮತ್ತು ಪಟ್ಟಣ ಪ್ರದೇಶಗಳಲ್ಲಿ 5,000 ನಗರ ಸ್ತ್ರೀಶಕ್ತಿ ಗುಂಪುಗಳನ್ನು ರಚಿಸಿ 75,000–1,00,000 ಮಹಿಳೆಯರನ್ನು ಈ ಯೋಜನೆಯಡಿ ಸಂಘಟಿಸುವುದು.
3. ಯೋಜನೆಯ ಉಸ್ತುವಾರಿಯನ್ನು ರಾಜ್ಯಮಟ್ಟದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ಇವರು ನೋಡಿಕೊಳ್ಳುವರು. ಜಿಲ್ಲಾ ಮಟ್ಟದಲ್ಲಿ ಸಹಾಯಕ ನಿರ್ದೇಶಕರು/ ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರು ನೋಡಿಕೊಳ್ಳುವರು. ತಾಲ್ಲೂಕು ಮಟ್ಟದಲ್ಲಿ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳಿಗೆ ವಹಿಸಲಾಗಿದೆ.
4. ಈ ಯೋಜನೆಯ ಅನುಷ್ಠಾನದ ಮಾಹಿತಿಯನ್ನು ಜಿಲ್ಲಾ ಮಟ್ಟದಲ್ಲಿ ಮತ್ತು ರಾಜ್ಯ ಮಟ್ಟದಲ್ಲಿ ಗಣಕ ಯಂತ್ರಗಳಲ್ಲಿ ಅಳವಡಿಸುವುದು.

**4. ಯೋಜನೆಯ ಅನುಷ್ಠಾನದ ಕಾರ್ಯತಂತ್ರ:**

1. ಸಣ್ಣ ವ್ಯಾಪಾರ ಮಾಡುತ್ತಿರುವ ಮತ್ತು ಮಾಡಲು ಇಚ್ಛೆಯುಳ್ಳ ಮಹಿಳೆಯರು ನಗರ ಸ್ತ್ರೀಶಕ್ತಿ ಗುಂಪುಗಳನ್ನು ರಚಿಸುವುದರಿಂದ, ಆ ಗುಂಪುಗಳು ಪ್ರಬಲ ಗುಂಪುಗಳಾಗಿ ಕಾರ್ಯನಿರ್ವಹಿಸಲು ಸಾಧ್ಯವಾಗುತ್ತದೆ.
2. ಗುಂಪುಗಳ ರಚನೆ ಕಾರ್ಯದಲ್ಲಿ ಈ ಕೆಳಕಾಣಿಸಿದ ಸೂಚಿತ ಅಂಶಗಳನ್ನು ಗಮನದಲ್ಲಿಡುವುದು.
   ಅ) ಬಡತನದ ರೇಖೆಗಿಂತ ಕೆಳಗೆ ಇರುವ ಪಟ್ಟಣ ಮತ್ತು ನಗರ ಪ್ರದೇಶಗಳ ಸಣ್ಣ ವ್ಯಾಪಾರ ಮಾಡುತ್ತಿರುವ ಅಥವಾ ಮಾಡಲಿಚ್ಛಿಸುವ ಮಹಿಳೆಯರು.
   ಆ) ಮಹಿಳಾ ಸಾಕ್ಷರತೆ.
   ಇ) ಪರಿಶಿಷ್ಟ ಜಾತಿ ಮತ್ತು ವರ್ಗಕ್ಕೆ ಸೇರಿದ ಕುಟುಂಬ.
   ಉ) ಅಂಗವಿಕಲ ಮಹಿಳೆ ಇರುವ ಕುಟುಂಬ.
   ಊ) 18–45 ವಯೋಮಿತಿಯೊಳಗಿನ ಮಹಿಳೆ

**5. ತರಬೇತಿ:**

ಈ ಯೋಜನೆಯಡಿ ತರಬೇತಿಯು ಮುಖ್ಯ ಪರಿಕರವಾಗಿರಲು ಈ ಕೆಳಕಾಣಿಸಿದ ತರಬೇತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು.

ಅ) ಜಿಲ್ಲೆಗಳ ಸಹಾಯಕ ನಿರ್ದೇಶಕರು/ ಉಪ ನಿರ್ದೇಶಕರುಗಳಿಗೆ ರಾಜ್ಯ ಮಟ್ಟದಲ್ಲಿ, ಬಾಲವಿಕಾಸ ಯೋಜನಾಧಿಕಾರಿಗಳಿಗೆ ಮತ್ತು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿಗಳಿಗೆ ವಿಭಾಗೀಯ ಮಟ್ಟದಲ್ಲಿ ಒಂದು ದಿನ ಜಾಗೃತ ತರಬೇತಿ ಕಾರ್ಯಕ್ರಮ.

ಆ) ಸಹಾಯಕ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಮತ್ತು ಮೇಲ್ವಿಚಾರಕರುಗಳಿಗೆ ಹಾಗೂ ಅಂಗನವಾಡಿ ಕಾರ್ಯಕರ್ತೆಯರುಗಳಿಗೆ ನುರಿತ ತರಬೇತಿ ಕೇಂದ್ರಗಳ ಮೂಲಕ ಜಿಲ್ಲಾ ಮಟ್ಟದಲ್ಲಿ ಎರಡು ದಿನಗಳ ತರಬೇತಿ ನೀಡುವುದು.

ಇ) ಗುಂಪು ರಚನೆಯಾದ ನಂತರ ಗುಂಪಿನ ಪ್ರತಿನಿದಿ–I ಮತ್ತು ಪ್ರತಿನಿದಿ–II ಗುಂಪಿನ ಸಮರ್ಥ ನಿರ್ವಹಣೆ ಬಗ್ಗೆ ತರಬೇತಿ ನೀಡುವುದು.

ಈ) ಜಿಲ್ಲಾ ಮಟ್ಟದ ಇಲಾಖೆಯ ಅಧಿಕಾರಿಗಳಿಗೆ ಹಾಗೂ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳಿಗೆ ವಿಭಾಗೀಯ ಮಟ್ಟದಲ್ಲಿ ಕಾರ್ಯಾಗಾರವನ್ನು ನಡೆಸುವುದು.

ಉ) ರಾಜ್ಯ ಮಟ್ಟದಲ್ಲಿ ಸಮ್ಮೇಳನ ನಡೆಸುವುದು.

ಊ) ಗುಂಪುಗಳ ರಚನೆಯಾದ ಕೂಡಲೆ ಗುಂಪುಗಳ ಉಳಿತಾಯ ಚಟುವಟಿಕೆಗಳೂ ಸೇರಿದಂತೆ ತಮ್ಮ ಚಟುವಟಿಕೆಗಳನ್ನು ಗುಂಪುಗಳು ಪ್ರಾರಂಭಿಸುವುದು. ಆರು ತಿಂಗಳ ನಂತರ ಗುಂಪುಗಳು ತಮ್ಮೆಲ್ಲಾ ಚಟುವಟಿಕೆಗಳನ್ನು ತಾವೇ ನಡೆಸಿಕೊಂಡು ಹೋಗುವಂತೆ ಅಂಗನವಾಡಿ ಕಾರ್ಯಕರ್ತೆಯರು, ಮೇಲ್ವಿಚಾರಕಿಯರು ಹಾಗೂ ಸಹಾಯಕ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ತಯಾರು ಮಾಡುವುದು.

ಋ) ಅಂಗನವಾಡಿ ಕಾರ್ಯಕರ್ತೆಯ ಗುಂಪುಗಳ ರಚನೆ ಮಾಡಿದ ಕೂಡಲೆ ಗುಂಪುಗಳು ನಿಯತವಾಗಿ ವಾರದ ಸಭೆ ಸೇರಿ ಉಳಿತಾಯ ಮತ್ತು ಸಾಲದ ಚಟುವಟಿಕೆಗಳನ್ನು ಪ್ರಾರಂಭಿಸುವಂತೆ ಗುಂಪುಗಳ ಸದಸ್ಯರನ್ನು ತಯಾರು ಮಾಡುವುದು.

**6. ಗುಂಪುಗಳ ಬಲವರ್ಧನೆ:**

ಈ ಯೋಜನೆಯಲ್ಲಿ ಗುಂಪುಗಳು ತಮ್ಮ ಚಟುವಟಿಕೆಯನ್ನು ನಡೆಸಲು ಮೊದಲ 6 ತಿಂಗಳು ಮಾತ್ರ ಅಂಗನವಾಡಿ ಕಾರ್ಯಕರ್ತೆಯರು ಮತ್ತು ಮೇಲ್ವಿಚಾರಕಿಯರ ಸಹಾಯ ಮತ್ತು ಸಹಕಾರ ಪಡೆದುಕೊಳ್ಳುವುದು. ಗುಂಪು ರಚನೆ ನಂತರ ಅಂಗನವಾಡಿ ಕಾರ್ಯಕರ್ತೆಯರು 6 ತಿಂಗಳ ಕಾಲ ಗುಂಪುಗಳ ಮೇಲು ಉಸ್ತುವಾರಿ ನೋಡಿಕೊಳ್ಳುವುದು. 3 ತಿಂಗಳ

ನಂತರ ಗುಂಪುಗಳು ಸಣ್ಣ ಪ್ರಮಾಣದಲ್ಲಿ ಅಂತರಿಕ ಸಾಲ ಚಟುವಟಿಕೆಗಳನ್ನು ಹಾಗೂ ಗುಂಪು ರಚನೆಯಾಗಿ ಮೊದಲ ವಾರದ ಸಭೆಯ ನಂತರ ಬ್ಯಾಂಕಿನಲ್ಲಿ ಕಡ್ಡಾಯವಾಗಿ ಉಳಿತಾಯದ ಖಾತೆಯನ್ನು ತೆರೆಯುವಂತೆ ಕ್ರಮ ಕೈಗೊಳ್ಳುವುದು.

**7. ಪರಿಕರ ಪೂರೈಕೆ:**

1. ಅಂಗನವಾಡಿ ಕಾರ್ಯಕರ್ತೆಯರಿಗೆ, ಮೇಲ್ವಿಚಾರಕಿಯರಿಗೆ ಗುಂಪುಗಳ ರಚನೆ ಹಾಗೂ ಅವುಗಳ ನಿರ್ವಹಣೆ ಕುರಿತು ಸಂಕ್ಷಿಪ್ತ ಮಾಹಿತಿ ತಯಾರಿಸಿ ಒದಗಿಸುವುದು.
2. ಪ್ರತಿಯೊಂದು ಗುಂಪಿಗೂ ಕೆಲವು ಮೂಲಭೂತ ಉಪಕರಣ : ಸಲಕರಣೆ : ಇತರೇ ದಾಸ್ತವೇಜು, ಲೇಖನ ಸಾಮಗ್ರಿ ಇತ್ಯಾದಿ ರೂ. 600 ಮೌಲ್ಯದ ಕಿಟ್ ಒಂದನ್ನು ಪ್ರಾರಂಭಿಕ ಹಂತದಲ್ಲಿ ಒದಗಿಸುವುದು.

**8. ಸುತ್ತು ನಿಧಿ:**

ಪ್ರತಿಯೊಂದು ಗುಂಪು 6 ತಿಂಗಳ ಕಾಲ ಕೆಲಸ ನಿರ್ವಹಿಸಿ ಗ್ರೇಡಿಂಗ್ ಮೂಲಕ ಗುಂಪಿನ ಸ್ಥಿರೀಕರಣದ ಬಗ್ಗೆ ಖಾತರಿಪಡಿಸಿಕೊಂಡು ಸರ್ಕಾರದ ವತಿಯಿಂದ ನಿಗಮದ ಮೂಲಕ ಸುತ್ತಿ ನಿಧಿ ರೂ. 5,000 ಗಳನ್ನು ಪ್ರತಿಯೊಂದು ನಗರ ಸ್ತ್ರೀಶಕ್ತಿ ಗುಂಪಿಗೆ ನೀಡಲಾಗುವುದು. ಗುಂಪಿನ ಉಳಿತಾಯ ಮತ್ತು ಸುತ್ತು ನಿಧಿಯ ಹಣವನ್ನು ಬಳಸಿಕೊಂಡು ಗುಂಪಿನ ಎಲ್ಲಾ ಸದಸ್ಯರು ಈ ಯೋಜನೆಯಡಿ ಗುರುತಿಸಿರುವ ಸಣ್ಣ ವ್ಯಾಪಾರ ಮಾಡುವುದು. ಸದಸ್ಯರು ಪಡೆದ ಸಾಲ ಮರುಪಾವತಿ ಮಾಡುತ್ತಿರುವ ಅಥವಾ ಈ ಹಣ ದುರುಪಯೋಗ ಆಗದಿರುವಂತೆ, ಮೇಲ್ವಿಚಾರಕಿಯರು ಮತ್ತು ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಸತತ ಉಸ್ತುವಾರಿ ಮಾಡುವುದು.

**9. ಬ್ಯಾಂಕ್ ಸಂಬಂಧ ಕಲ್ಪಿಸುವುದು ಮತ್ತು ಇತರ ಸೇವಾ ಸೌಲಭ್ಯಗಳು:**

1. ಗುಂಪುಗಳ ರಚನೆಯ ಹಂತದಲ್ಲಿಯೇ ಆಯಾಯಾ ಕ್ಷೇತ್ರವ್ಯಾಪ್ತಿಯಲ್ಲಿ ಬರುವ ಬ್ಯಾಂಕುಗಳೊಂದಿಗೆ ಸಂಬಂಧ ಕಲ್ಪಿಸಲು ಕ್ರಮ ಕೈಗೊಳ್ಳುವುದು. ಗುಂಪುಗಳು ತಮ್ಮ ಉಳಿತಾಯದ ಹಣವನ್ನು ಬ್ಯಾಂಕುಗಳಲ್ಲಿ ಜಮಾ ಮಾಡಿ ತಮ್ಮ ಉಳಿತಾಯದ ಹಣದಲ್ಲಿ ಮೊದಲ ಆಂತರಿಕ ಸಾಲ ಪಡೆಯುವುದು. ಹಾಗೂ ಮರುಪಾವತಿ ಮಾಡುವ ರೂಡಿ ಬೆಳಸಿ ಅವುಗಳ ಮೌಲ್ಯಮಾಪನ ಮಾಡಿ (ಗ್ರೇಡಿಂಗ್) ಬ್ಯಾಂಕುಗಳಿಂದ ಸಾಲ ದೊರೆಯುವಂತೆ ವ್ಯವಸ್ಥೆ ಮಾಡುವುದು.
2. ರಾಷ್ಟ್ರೀಯ ಮಹಿಳಾ ಕೋಶ (ಆರ್.ಎಂ.ಕೆ) ಹಾಗೂ ನಬಾರ್ಡ್ ಸಂಸ್ಥೆಗಳೂ ಈ ಸ್ವ-ಸಹಾಯ ಗುಂಪುಗಳಿಗೆ ಸಾಲ ಹಾಗೂ ಸಹಾಯಧನ ನೀಡುವ ಸೌಲಭ್ಯಗಳನ್ನು ಹೊಂದಿರುವುದರಿಂದ ಇವುಗಳ ಉಪಯೋಗವನ್ನು ಪಡೆಯುವಂತೆ ಕ್ರಮ ಕೈಗೊಳ್ಳುವುದು.

**10. ಅಂಗನವಾಡಿ ಕಾರ್ಯಕರ್ತೆಯರಿಗೆ ಪ್ರೋತ್ಸಾಹ ಧನ:**

ಪಟ್ಟಣ ಮತ್ತು ನಗರ ಪ್ರದೇಶಗಳ ಅಂಗನವಾಡಿ ಕಾರ್ಯಕರ್ತೆಯರಿಗೆ ಪ್ರತಿಗುಂಪಿನ ರಚನೆಗೆ ತಿಂಗಳಿಗೆ ರೂ. 50.00 ರಂತೆ 12 ತಿಂಗಳವರೆಗೆ ಪ್ರೋತ್ಸಾಹಧನ ನೀಡಲಾಗುವುದು.

**11. ಈ ಯೋಜನೆಯ ಚಟುವಟಿಕೆಗಳು:**

ಈ ಯೋಜನೆಯಡಿ ಸಣ್ಣ ವ್ಯಾಪಾರಗಳನ್ನು ನಿಗಮವು ಗುರುತಿಸಿ ಪಟ್ಟಿ ಮಾಡಿದೆ.

ಈ ಪಟ್ಟಿಯ ಚಟುವಟಿಕೆಗಳ ಹೊರತಾಗಿ ಆಯಾಯ ಪ್ರಾದೇಶಿಕ ಜನ ಜೀವನಕ್ಕೆ ಅವಶ್ಯಕ ಹಾಗೂ ಸೂಕ್ತವೆನಿಸುವ ಇನ್ನಾವುದೇ ಚಟುವಟಿಕೆಗಳನ್ನು ಮಾಡಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್.ಎಂ. ಚಂದ್ರಮ್ಮ,**

ಸರ್ಕಾರದ ಅಧೀನ ಕಾರ್ಯದರ್ಶಿ

ಮಹಿಳಾ ಮತ್ತು ಮಕ್ಕಳ ಅಭಿವೃದ್ದಿ ಇಲಾಖೆ.

**ಸಣ್ಣ ವ್ಯಾಪಾರ ಚಟುವಟಿಕೆಗಳ ಪಟ್ಟಿ**

| | |
|---|---|
| 1. ತರಕಾರಿ ವ್ಯಾಪಾರ | 2. ವಿಳೇದೆಲೆ ವ್ಯಾಪಾರ |
| 3. ತೆಂಗಿನ ಕಾಯಿ | 4. ಹೂವಿನ ವ್ಯಾಪಾರ |
| 5. ಹಾಲು, ಮೊಸರು, ಬೆಣ್ಣೆ, ತುಪ್ಪ | 6. ಸಾಂಬಾರ್ ಪದಾರ್ಥ |
| 7. ಕುರುಕಲು ತಿಂಡಿ | 8. ಮೀನು ವ್ಯಾಪಾರ |
| 9. ಕೋಳಿ ವ್ಯಾಪಾರ | 10. ಮೊಟ್ಟೆ ವ್ಯಾಪಾರ |
| 11. ಹಣ್ಣಿನ ವ್ಯಾಪಾರ | 12. ಸುಣ್ಣದ ವ್ಯಾಪಾರ |
| 13. ಕಸಬರಿಗೆ | 14. ಮಡಿಕೆ ವ್ಯಾಪಾರ |
| 15. ಪ್ಲಾಸ್ಟಿಕ್ ವಸ್ತುಗಳು | 16. ಚಪ್ಪಲಿ ಮಾರಾಟ |
| 17. ಸ್ಟೀಲ್ ಸಾಮಾನುಗಳು | 18. ಡಿಟರ್ಜೆಂಟ್ಸ್ |
| 19. ಫಿನಾಯಿಲ್, ಬ್ಲೀಚಿಂಗ್ ಪೌಡರ್ | 20. ಸೀರೆ ವ್ಯಾಪಾರ |
| 21. ಸಿದ್ದಪಡಿಸಿದ ಉಡುಪು | 22. ಉಪ್ಪಿನ ಕಾಯಿ |
| 23. ಕಡಲೆಕಾಯಿ | 24. ಹುರಿಗಾಳು |
| 25. ಬಳೆ | 26. ಎಣ್ಣೆ |
| 27. ಐಸ್ ಕ್ಯಾಂಡಿ | 28. ರಂಗೋಲೆ ಪುಡಿ |
| 29. ಹರಿಶಿನ, ಕುಂಕುಮ | 30. ಪೂಜಾ ಸಾಮಗ್ರಿಗಳು |

| | |
|---|---|
| 31. ಊದಿನ ಕಡ್ಡಿ | 32. ಕೈ ಚೀಲಗಳು |
| 33. ಕಾಲೊರಸು | 34. ಎಳೆನೀರು |
| 35. ಫಾಸ್ಟ್‌ಫುಡ್ : ಬೊಂಡ, ಗೋಬಿಮಂಜೂರಿ, ಇಡ್ಲಿ, ದೋಸೆ, ಕಬಾಬ್, ಟೀ. ಕಾಫಿ ಸ್ಟಾಲ್ | 36. ಕಬ್ಬಿನ ಹಾಲು |
| 37. ಹಣ್ಣಿನ ಜ್ಯೂಸ್ | 38. ಹಗ್ಗಗಳ ಮಾರಾಟ |
| 39. ಹಿಂಡಿ, ಭೂಸ | 40. ಊಟದ ಎಲೆ |
| 41. ಗುದ್ದಲಿ, ಸಲಿಕೆ | 42. ಬುಟ್ಟಿ |
| 43. ಚಾಪೆ | 44. ಬೆಡ್ ಶೀಟ್, ಕಂಬಳಿ |
| 45. ಜರಡಿ | 46. ಸೀಗೇಕಾಯಿ ಪುಡಿ |
| 47. ಬಿದಿರಿನ ವಸ್ತುಗಳು | 48. ಹುರಿ ಹಿಟ್ಟು |
| 49. ಕಟ್ಟಿಗೆ ವ್ಯಾಪಾರ | 50. ಹರ್ಬಲ್ ಮೆಡಿಸನ್ |
| 51. ಗೃಹಲಂಕಾರಿಕ ವಸ್ತುಗಳ ಮಾರಾಟ | 52. ಸಂಚಾರಿ ಹೋಟೆಲ್ |
| 53. ಹಳೇ ಮತ್ತು ಹೊಸ ಪುಸ್ತಕ ವ್ಯಾಪಾರ ಮತ್ತು ಲೇಖನ ಸಾಮಗ್ರಿ | 54. ಮಸಾಲೆ ಸಾಮಗ್ರಿಗಳ ವ್ಯಾಪಾರ |
| 55. ಡ್ರೈಪ್ರುಟ್ಸ್ ವ್ಯಾಪಾರ | 56. ಬಣ್ಣದ ಆಟಿಕೆಗಳು |
| 57. ಹಳೇ ದಿನ ಪತ್ರಿಕೆ | 58. ಹಳೇ ವಸ್ತುಗಳನ್ನು ಕೊಳ್ಳುವ ವ್ಯಾಪಾರ |

ಈ ಪಟ್ಟಿಯಲ್ಲಿನ ಚಟುವಟಿಕೆಗಳ ಹೊರತಾಗಿ ಆಯಾಯ ಪ್ರಾದೇಶಿಕ ಜನ ಜೀವನಕ್ಕೆ ಅವಶ್ಯಕ ಹಾಗೂ ಸೂಕ್ತವೆನಿಸುವ ಇನ್ನಾವುದೇ ಚಟುವಟಿಕೆಗಳನ್ನು ಮಾಡಬಹುದಾಗಿದೆ.

**ಆರ್.ಎಂ. ಚಂದ್ರಮ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

ಪಿ.ಆರ್. 1177

## ಸಮಾಜ ಕಲ್ಯಾಣ ಸಚಿವಾಲಯ

ವಿಷಯ: ನಿರಾಶ್ರಿತರ ಪರಿಹಾರ ಕೇಂದ್ರಕ್ಕೆ ಸೇರಿರುವ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ ಮತ್ತು ಬೆಂಗಳೂರು ಮಹಾನಗರ ಪಾಲಿಕೆ ಈ ಸಂಸ್ಥೆಗಳಿಗೆ ಗುತ್ತಿಗೆ ಆಧಾರದ ಮೇಲೆ ಜಮೀನು ನೀಡುವ ಆದೇಶ ಜಾರಿ ಕುರಿತು.

ಓದಲಾಗಿದೆ: (1) ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ ಇವರ ಪತ್ರ ಸಂಖ್ಯೆ: ಬೆಮಸಾಸಂ/ಕೇಕ/ಕಾಇ/ಆಸ್ತಿ/064/2003-04, ದಿನಾಂಕ: 20-12-2003 ಮತ್ತು ಬೆಮಸಾಸಂ/ಕೇಕ/ವಾಣಿಜ್ಯ/ಆಸ್ತಿ/122/2005-06, ದಿನಾಂಕ: 15-04-05.

(2) ಆಯುಕ್ತರು, ಬೆಂಗಳೂರು ಮಹಾನಗರ ಪಾಲಿಕೆ ಇವರ ಪತ್ರ ಸಂಖ್ಯೆ: ಇಎಸ್‌ಟಿ/ ಆರ್.ಎಸ್ (ಎಸ್)ಪಿಆರ್:17/03-04, ದಿನಾಂಕ: 23-12-2003

(3) ದಿನಾಂಕ: 10-12-2003 ರಂದು ನಡೆದ ಕೇಂದ್ರ ಪರಿಹಾರ ಸಮಿತಿಯ ಸಭೆಯ ನಡವಳಿ.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ.(1) ರ ಪತ್ರಗಳಲ್ಲಿ ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ ವ್ಯವಸ್ಥಾಪಕ ನಿರ್ದೇಶಕರು, ಇವರು ವರದಿ ಮಾಡುತ್ತಾ ನಗರವು ವ್ಯಾಪಕವಾಗಿ ಬೆಳೆಯುತ್ತಿದ್ದು, ಕಾಮಾಕ್ಷಿಪಾಳ್ಯ, ಸುಂಕದಕಟ್ಟೆ ಹಾಗೂ ಸುತ್ತಮುತ್ತಲಿನ ಇತರೇ ಪ್ರದೇಶದ ಜನರ ಅಗತ್ಯತೆಯನ್ನು ಪೂರೈಸಲು, ಮಾಗಡಿ ರಸ್ತೆಯ ಸುತ್ತಮುತ್ತ 5-6 ಕಿ.ಮೀ. ನವರೆಗೆ ಬಸ್ ನಿಲ್ದಾಣ ಹಾಗೂ ಬಸ್ ಡಿಪೋ ಇರುವುದಿಲ್ಲವೆಂದು ಮಾಗಡಿ ರಸ್ತೆಯ ಪ್ರದೇಶದ ಸಾರ್ವಜನಿಕರಿಗೆ ಸಾರಿಗೆ ಸೌಲಭ್ಯವನ್ನು ಒದಗಿಸಲು ನಾಲ್ಕು ಎಕರೆ ಜಮೀನನ್ನು ಗುತ್ತಿಗೆ ಆಧಾರದ ಮೇಲೆ ನೀಡುವಂತೆ ಹಾಗೂ ಸರ್ಕಾರವು ನಿಗದಿಪಡಿಸಬಹುದಾದ ಯಾವುದೇ ಮೊತ್ತವನ್ನು ಪಾವತಿಸಲು ಸಿದ್ದವಿರುವುದಾಗಿ ದಿನಾಂಕ:20-12-2003 ಮತ್ತು 15-04-2005ರ ಪತ್ರಗಳಲ್ಲಿ ಪ್ರಸ್ತಾಪಿಸಿರುವರು.

ಮೇಲೆ ಓದಲಾದ ಕ್ರ.ಸಂ. (2), ದಿನಾಂಕ: 23-12-2003ರ ಪತ್ರದಲ್ಲಿ ಬೆಂಗಳೂರು ಮಹಾನಗರ ಪಾಲಿಕೆಯ ಆಯುಕ್ತರು, ವೃಷಭಾವತಿ ನದಿ ಕಣಿವೆ ಮತ್ತು ಬೆಂಗಳೂರು ಉತ್ತರ ತಾಲ್ಲೂಕಿನ ಯಶವಂತಪುರ ಹೋಬಳಿಯ ಶ್ರೀಗಂಧದ ಕಾವಲು ಗ್ರಾಮದ ಹೊರ ವರ್ತುಲ ರಸ್ತೆಯ ಮಧ್ಯದಲ್ಲಿ ಐದು ಎಕರೆ ಜಮೀನನ್ನು ಸಾರ್ವಜನಿಕರ ಸೌಕರ್ಯಕ್ಕಾಗಿ ವಿದ್ಯುತ್ ಚಿತಾಗಾರ ನಿರ್ಮಿಸಲು ಪ್ರಸ್ತಾಪಿಸಿರುವರು.

ಮೇಲೆ ಓದಲಾದ ಕ್ರ.ಸಂ. (3)ರ ದಿನಾಂಕ: 10-12-03 ಪತ್ರದಲ್ಲಿ, ಕೇಂದ್ರ ಪರಿಹಾರ ಸಮಿತಿ, ಬೆಂಗಳೂರು, ಇದರ ಕಾರ್ಯದರ್ಶಿ ಇವರು ಸದರಿ ಪ್ರಸ್ತಾವನೆಗಳನ್ನು ಗಮನಿಸಿ ದಿನಾಂಕ: 10-12-03 ರಂದು ನಡೆದ ಆಡಳಿತ ಮಂಡಳಿ ಸಭೆಯಲ್ಲಿ ಚರ್ಚಿಸಿದ್ದು, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ ಹಾಗೂ ಬೆಂಗಳೂರು ಮಹಾನಗರ ಪಾಲಿಕೆ ಇವುಗಳಿಗೆ ಗುತ್ತಿಗೆ ಆಧಾರದ ಮೇಲೆ ಭೂಮಿ ನೀಡುವ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಕಳುಹಿಸಲು ಸೂಕ್ತ ನಿರ್ಧಾರ ಕೈಗೊಳ್ಳಲು ತೀರ್ಮಾನಿಸಿತು. ಮುಂದುವರೆದು ಕೇಂದ್ರ ಪರಿಹಾರ ಸಮಿತಿಯ ಜಮೀನನ್ನು ಸರ್ಕಾರಿ ಸ್ವಾಮ್ಯದ ಈ ಸಂಸ್ಥೆಗಳಿಗೆ ಗುತ್ತಿಗೆ ಆಧಾರದ ಮೇಲೆ ನೀಡಿದ್ದಲ್ಲಿ, ಕೇಂದ್ರ ಪರಿಹಾರ ಸಮಿತಿಗೆ ಗಣನೀಯ ಆದಾಯವನ್ನು ತರುವುದಲ್ಲದೇ ಅತಿಕ್ರಮಣಕಾರರಿಂದ

ಜಮೀನನ್ನು ಸಂರಕ್ಷಿಸಬಹುದೆಂಬ ಇಂಗಿತ ವ್ಯಕ್ತಪಡಿಸಿ ಸೂಕ್ತ ನಿರ್ಧಾರ ಕೈಗೊಳ್ಳಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುವರು. ಪ್ರಸ್ತಾವನೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಜಾರಿ ಮಾಡಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಕಇ 40 ಎಸ್‌ಬಿಆರ್ 2003 ಬೆಂಗಳೂರು, ದಿನಾಂಕ: 16ನೇ ಆಗಸ್ಟ್ 2005**

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದೆ. ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಬಸ್ ಡಿಪೋ ಹಾಗೂ ಬಸ್ ಸ್ಟ್ಯಾಂಡ್ ನಿರ್ಮಿಸಲು ನಿರಾಶ್ರಿತರ ಪರಿಹಾರ ಕೇಂದ್ರ ಬೆಂಗಳೂರು, ಇವರಿಗೆ ಸೇರಿದ ಶ್ರೀಗಂಧದ ಕಾವಲು ಗ್ರಾಮದಲ್ಲಿರುವ ಸರ್ವೆ ನಂ:60 ಮತ್ತು 68ರಲ್ಲಿ ನಾಲ್ಕು ಎಕರೆ ಜಮೀನನ್ನು ವಾರ್ಷಿಕ ಪ್ರತಿ ಎಕರೆಗೆ ರೂ.10,000.00 (ಹತ್ತು ಸಾವಿರ ರೂ.ಗಳು ಮಾತ್ರ) ಗುತ್ತಿಗೆ ದರದಂತೆ, ಮೂವತ್ತು ವರ್ಷಗಳ ಕಾಲ ಗುತ್ತಿಗೆ ಆಧಾರದ ಮೇಲೆ ನೀಡಲು ಸರ್ಕಾರವು ಅನುಮತಿ ನೀಡಿದೆ.

ಬೆಂಗಳೂರು ಮಹಾನಗರ ಪಾಲಿಕೆಯು ವಿದ್ಯುತ್ ಚಿತಾಗಾರ ನಿರ್ಮಿಸಲು ನಿರಾಶ್ರಿತರ ಪರಿಹಾರ ಕೇಂದ್ರ ಬೆಂಗಳೂರು, ಇವರಿಗೆ ಸೇರಿದ ಶ್ರೀಗಂಧದ ಕಾವಲು ಗ್ರಾಮದಲ್ಲಿರುವ ಸರ್ವೆ ನಂ:68ರಲ್ಲಿ ಎರಡು ಎಕರೆ ಜಮೀನನ್ನು ವಾರ್ಷಿಕ ಪ್ರತಿ ಎಕರೆಗೆ ರೂ. 100.00 (ಒಂದು ನೂರು ರೂ. ಮಾತ್ರ) ಗುತ್ತಿಗೆ ದರದಂತೆ ಮೂವತ್ತು ವರ್ಷಗಳ ಕಾಲ ಗುತ್ತಿಗೆ ಆಧಾರದ ಮೇಲೆ ನೀಡಲು ಸರ್ಕಾರವು ಅನುಮತಿ ನೀಡಿದೆ.

ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ ಹಾಗೂ ಬೆಂಗಳೂರು ಮಹಾನಗರ ಪಾಲಿಕೆಗೆ ಗುತ್ತಿಗೆ ಆಧಾರದ ಮೇಲೆ ನೀಡುವ ಸಂಬಂಧದ ಷರತ್ತು ಹಾಗೂ ನಿಬಂಧನೆಗಳನ್ನು ಒಂದು ತಿಂಗಳ ಒಳಗಾಗಿ ಹೊರಡಿಸಲಾಗುವುದು.

ಗುತ್ತಿಗೆ ನೀಡುತ್ತಿರುವ ಜಮೀನಿನ ಮೋಜಣಿ ಮಾಡಿಸಲು ಚಕ್ಕುಬಂದಿ ನಿಗದಿ ಪಡಿಸಲು ನಕಾಶೆಯನ್ನು ತಯಾರಿಸಲು ಕಂದಾಯ ಇಲಾಖೆಯ ಅಧಿಕಾರಿ/ಸಿಬ್ಬಂದಿಗಳ ಸಕ್ಷಮ ಸಮ್ಮುಖದಲ್ಲಿ ತಯಾರಿಸಿ ಮೇಲ್ಕಂಡ ಸಂಸ್ಥೆಗಳಿಗೆ ಜಮೀನನ್ನು ಚಾಲ್ತಿಯಲ್ಲಿರುವ ನಿಯಮಾನುಸಾರ ಹಸ್ತಾಂತರಿಸುವುದು. ಈ ಪ್ರಕ್ರಿಯೆಗೆ ತಗಲುವ ಎಲ್ಲಾ ವೆಚ್ಚಗಳನ್ನು ಸಂಬಂಧಪಟ್ಟ ಸಂಸ್ಥೆಗಳೇ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಮರುಳಸಿದ್ದಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಮಾಜ ಕಲ್ಯಾಣ ಇಲಾಖೆ.

ಪಿ.ಆರ್. 1189

**ವಿಷಯ :** ಕರ್ನಾಟಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತ ಇದನ್ನು "ಡಾ: ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮ ನಿಯಮಿತ" ಎಂಬುದಾಗಿ ಮರುನಾಮಕರಣ ಮಾಡುವ ಕುರಿತಾದ ಆದೇಶ.

**ಓದಲಾಗಿದೆ :** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪರಿಶಿಷ್ಟ ಜಾತಿ: ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮ, ಇವರ ಪತ್ರ ಸಂಖ್ಯೆ: ಕಪಜಾಪವಅನಿ: ಸಂಯೋ: ರಾಜ್ಯಪಾಲರ ಭಾಷಣ: 2005-06/9:1 ದಿನಾಂಕ: 18.04.05 ಹಾಗೂ ಪತ್ರ ಸಂಖ್ಯೆ: ಕಪಜಾಪವಅನಿ:ಸಂಯೋ: ರಾಜ್ಯಪಾಲರ ಭಾಷಣ 2005-06, ದಿನಾಂಕ: 23.06.05.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರಗಳಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮ ಇವರು ಸನ್ಮಾನ್ಯ ರಾಜ್ಯಪಾಲರು ಉಭಯ ಸದನಗಳ ಜಂಟಿ ಅಧಿವೇಶನವನ್ನು ಉದ್ದೇಶಿಸಿ ದಿನಾಂಕ: 20.01.05 ರಂದು 2005-06ನೇ ಸಾಲಿನಲ್ಲಿ ಕೈಗೊಳ್ಳುವ ವಿವಿಧ ಕಾರ್ಯಕ್ರಮಗಳು ಮತ್ತು ಆಶ್ವಾಸನೆಗಳ ಬಗ್ಗೆ ಮಾಡಿದ ಭಾಷಣದ ಕರ್ನಾಟಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮವನ್ನು "ಅಂಬೇಡ್ಕರ್ ಅಭಿವೃದ್ಧಿ ನಿಗಮ" ಎಂದು ನಿಗಮದ ಹೆಸರನ್ನು ಬದಲಾಯಿಸಿ ಮರುನಾಮಕರಣ ಮಾಡುವುದಾಗಿ ಪ್ರಸ್ತಾಪಿಸಿರುತ್ತಾರೆ.

ಕರ್ನಾಟಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮದ ಹೆಸರನ್ನು ಬದಲಾಯಿಸಲು ನಿಗಮದ ನಿರ್ದೇಶಕರುಗಳ ಮಂಡಳಿಯ 162ನೇ ಸಭೆಯಲ್ಲಿ ಚರ್ಚಿಸಿದ್ದು, ಇದೊಂದು ಪಾಲಿಸಿ ವಿಷಯವಾಗಿದ್ದರಿಂದ ಸರ್ಕಾರವೇ ಸೂಕ್ತ ನಿರ್ಣಯ ಕೈಗೊಳ್ಳಬೇಕೆಂದು ಮೇಲೆ ಓದಲಾದ ಪತ್ರಗಳಲ್ಲಿ ವ್ಯವಸ್ಥಾಪಕ ನಿರ್ದೇಶಕರು ಸರ್ಕಾರದ ಅವಗಾಹನೆಗೆ ತಂದಿರುತ್ತಾರೆ. ಕಾರಣ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಕಇ 108 ಎಸ್‌ಡಿಸಿ 2005 ಬೆಂಗಳೂರು, ದಿನಾಂಕ: 16ನೇ ಆಗಸ್ಟ್ 2005**

ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. "ಕರ್ನಾಟಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತ" ಸಂಸ್ಥೆಯ ಹೆಸರನ್ನು "ಡಾ. ಬಿ. ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮ ನಿಯಮಿತ" ಎಂಬುದಾಗಿ, ಮರುನಾಮಕರಣ ಮಾಡಿ ಸರಕಾರ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ಎಸ್. ಮರುಳಸಿದ್ದಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಮಾಜ ಕಲ್ಯಾಣ ಇಲಾಖೆ.

ಪಿ.ಆರ್.1188

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ತಾಲ್ಲೂಕು ಮಟ್ಟದ ಜಾಗೃತ ಸಮಿತಿ ರಚನೆ ಬಗ್ಗೆ.

**ಉಲ್ಲೇಖ :** ಸರ್ಕಾರದ ಆದೇಶ ಸಂಖ್ಯೆ: ಪಿಡಿ 309 ಪಿಟಿಪಿ 94 ದಿನಾಂಕ: 16.3.1996.

**ಪ್ರಸ್ತಾವನೆ:**

ರಾಜ್ಯ ಸರ್ಕಾರದ ವಿವಿಧ ಕಾರ್ಯಕ್ರಮಗಳ ಅನುಷ್ಠಾನದ ಮೇಲೆ ನಿಗಾ ಇಡಲು ವಿಧಾನಸಭಾ ಸದಸ್ಯರ ಅಧ್ಯಕ್ಷತೆಯಲ್ಲಿ ಜಾಗೃತ ಸಮಿತಿ ರಚಿಸಬೇಕೆಂದು ವಿಧಾನ ಸಭೆಯಲ್ಲಿ ಚರ್ಚೆಯಾಗಿ ಸರಕಾರ ಈ ರೀತಿಯ ಸಮಿತಿ ರಚಿಸುವುದಾಗಿ ಭರವಸೆ ನೀಡಿರುತ್ತದೆ. ಉಲ್ಲೇಖದ ಸರ್ಕಾರಿ

ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮವನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ತಾಲ್ಲೂಕು ಮಟ್ಟದ ಜಾಗೃತ ಸಮಿತಿಯನ್ನು ರಚಿಸಲಾಗಿದೆ. ಈ ಸಭೆಗೆ ತಾಲ್ಲೂಕಿನಲ್ಲಿ ಅತಿ ಹೆಚ್ಚು ಕ್ಷೇತ್ರವನ್ನು ಪ್ರತಿನಿಧಿಸುವ ವಿಧಾನ ಸಭಾ ಸದಸ್ಯರು ಅಧ್ಯಕ್ಷರಾಗಿರುತ್ತಾರೆ. ಸರ್ಕಾರದ ಕಾರ್ಯಕ್ರಮಗಳ ಬಗ್ಗೆ ನಿಗಾ ಇಡಲು ವಿಧಾನಸಭಾ ಸದಸ್ಯರ ಅಧ್ಯಕ್ಷತೆಯಲ್ಲಿ ತಾಲ್ಲೂಕು ಮಟ್ಟದ ಜಾಗೃತ ಸಮಿತಿ ರಚಿಸಲು ಸರ್ಕಾರ ನಿರ್ಧರಿಸಿರುತ್ತದೆ. ಅದಕ್ಕಾಗಿ ಈ ಆದೇಶ.

**ಆದೇಶ ಸಂಖ್ಯೆ: ಗ್ರಾಅಪ 141/ಯೋಉಮಾ/05, ಬೆಂಗಳೂರು, ದಿನಾಂಕ: 18ನೇ ಆಗಸ್ಟ್ 2005**

ಪಂಚಾಯತ್ ರಾಜ್ ಸಂಸ್ಥೆಗಳಿಂದ ಅನುಷ್ಠಾನಗೊಳ್ಳುತ್ತಿರುವ ರಾಜ್ಯ ಸರ್ಕಾರದ ಕಾರ್ಯಕ್ರಮಗಳ ಪರಿಶೀಲನೆ ಮಾಡಲು ತಾಲ್ಲೂಕು ಮಟ್ಟದ ಜಾಗೃತ ಸಮಿತಿಯನ್ನು ಈ ಕೆಳಕಂಡಂತೆ ರಚನೆ ಮಾಡಲಾಗಿದೆ.

| | | |
|---|---|---|
| 1) | ತಾಲ್ಲೂಕಿನಲ್ಲಿ ಅತಿ ಹೆಚ್ಚು ಕ್ಷೇತ್ರವನ್ನು ಪ್ರತಿನಿಧಿಸುವ ವಿಧಾನ ಸಭಾ ಸದಸ್ಯರು | ಅಧ್ಯಕ್ಷರು |
| 2) | ತಾಲ್ಲೂಕಿನಲ್ಲಿ ಉಳಿದ ಭಾಗಗಳನ್ನು ಪ್ರತಿನಿಧಿಸುವ ವಿಧಾನ ಸಭಾ ಸದಸ್ಯರು | ಸಹ ಅಧ್ಯಕ್ಷರು |
| 3) | ತಾಲ್ಲೂಕು/ ತಾಲ್ಲೂಕಿನ ಭಾಗಗಳನ್ನು ಪ್ರತಿನಿಧಿಸುವ ಮತ್ತು ತಾಲ್ಲೂಕಿನಲ್ಲಿ ವಾಸವಾಗಿರುವ ವಿಧಾನ ಪರಿಷತ್ತಿನ ಸದಸ್ಯರು | ಸದಸ್ಯರು |
| 4) | ಅಧ್ಯಕ್ಷರು, ತಾಲ್ಲೂಕು ಪಂಚಾಯತಿ | ಸದಸ್ಯರು |
| 5) | ಉಪಾಧ್ಯಕ್ಷರು, ತಾಲ್ಲೂಕು ಪಂಚಾಯಿತಿ | ಸದಸ್ಯರು |
| 6) | ತಾಲ್ಲೂಕು/ ತಾಲ್ಲೂಕಿನ ಭಾಗಗಳನ್ನು ಪ್ರತಿನಿಧಿಸುವ ಜಿಲ್ಲಾ ಪಂಚಾಯತಿ ಸದಸ್ಯರುಗಳು | ಸದಸ್ಯರು |
| 7) | ತಾಲ್ಲೂಕು ಮಟ್ಟದ ಅಧಿಕಾರಿಗಳು | ಸದಸ್ಯರು |
| 8) | ತಾಲ್ಲೂಕು ಪಂಚಾಯತಿ ಕಾರ್ಯನಿರ್ವಾಹಕ ಅಧಿಕಾರಿ, | ಸದಸ್ಯ ಕಾರ್ಯದರ್ಶಿ |

ಸದರಿ ಸಮಿತಿಯ ಕಾರ್ಯಚಟುವಟಿಕೆಗಳು ಈ ಕೆಳಗಿನಂತಿರುತ್ತದೆ.

1) ಪಂಚಾಯತ್ ರಾಜ್ ಸಂಸ್ಥೆಗಳಿಂದ ಅನುಷ್ಠಾನಗೊಳ್ಳುತ್ತಿರುವ ರಾಜ್ಯ ಕಾರ್ಯಕ್ರಮಗಳ ಪರಿಶೀಲನೆ.
2) ಕಾರ್ಯಕ್ರಮಗಳ ಅನುಷ್ಠಾನದಲ್ಲಿ ಅವ್ಯವಹಾರ ನಡೆದಿದ್ದಲ್ಲಿ ಅವುಗಳನ್ನು ತನಿಖೆ ಮಾಡಿ ಸಂಬಂಧಪಟ್ಟವರಿಗೆ ಕ್ರಮ ತೆಗೆದುಕೊಳ್ಳಲು ವರದಿ ಕಳುಹಿಸುವುದು.
3) ದೂರುಗಳು ಏನಾದರೂ ಬಂದಲ್ಲಿ ಅವುಗಳನ್ನು ಸ್ವೀಕರಿಸಿ ಅವುಗಳ ಬಗ್ಗೆ ತನಿಖೆ ಮಾಡಿ ಸಂಬಂಧಪಟ್ಟವರ ಮೇಲೆ ಕ್ರಮ ತೆಗೆದುಕೊಳ್ಳಲು ಸಂಬಂಧಪಟ್ಟವರಿಗೆ ಶಿಫಾರಸ್ಸು ಮಾಡುವುದು.
4) ಯಾವ ಕಾರ್ಯಕ್ರಮಕ್ಕೆ ಹಣ ಬಿಡುಗಡೆ ಆಗಿದೆಯೋ ಅದೇ ಕಾರ್ಯಕ್ರಮಕ್ಕೆ ಹಣ ವಿನಿಯೋಗ ಆಗಿರುವ ಬಗ್ಗೆ ಖಾತ್ರಿ ಪಡಿಸಿಕೊಳ್ಳುವುದು.
5) ನಿಯಮಾವಳಿಗಳು ಮತ್ತು ಮಾರ್ಗಸೂಚಿಗಳನ್ವಯ ಕಾರ್ಯಕ್ರಮಗಳ ಅನುಷ್ಠಾನ ಜಾರಿಯಾಗಿದೆಯೋ ಇಲ್ಲವೋ ಎಂಬ ಬಗ್ಗೆ ಪರಿಶೀಲಿಸುವುದು.
6) ಕಾರ್ಯಕ್ರಮಗಳ ಅನುಷ್ಠಾನ ಸುಧಾರಣೆಗೆ ಸಲಹೆಗಳನ್ನು ನೀಡುವುದು.
7) ಫಲಾನುಭವಿಗಳಿಗೆ ಸರಿಯಾಗಿ ಪ್ರಯೋಜನಗಳು ತಲುಪಿದ ಬಗ್ಗೆ ಖಾತ್ರಿಪಡಿಸಿಕೊಳ್ಳುವುದು.
8) ಯಾವುದೇ ಕಾರ್ಯಕ್ರಮದಡಿ ಗ್ರಾಮ ಸಭೆಯಿಂದ ಅನರ್ಹ ಫಲಾನುಭವಿಗಳು ಆಯ್ಕೆ ಆಗಿದ್ದಲ್ಲಿ ಅದನ್ನು ತಿರಸ್ಕರಿಸಿ ಪುನಃ ಗ್ರಾಮಸಭೆಯಲ್ಲಿ ಅರ್ಹ ಫಲಾನುಭವಿಗಳ ಆಯ್ಕೆ ಮಾಡಲು ಸಂಬಂಧಪಟ್ಟ ಪಂಚಾಯತ್ ರಾಜ್ ಸಂಸ್ಥೆ/ ಇಲಾಖೆಗೆ ಶಿಫಾರಸ್ಸು ಮಾಡುವುದು.

ಸದಸ್ಯ ಕಾರ್ಯದರ್ಶಿಗಳು ಪ್ರತಿ ತ್ರೈಮಾಸಿಕದಲ್ಲಿ ಕನಿಷ್ಠ ಒಂದು ಸಭೆಯನ್ನು ನಡೆಸಲು ಕ್ರಮ ತೆಗೆದುಕೊಳ್ಳಬೇಕು. ಸಮಿತಿಯ ಅಧ್ಯಕ್ಷರಿಂದ ಸಭೆಯ ದಿನಾಂಕವನ್ನು ಪಡೆದು 7 ಕೆಲಸದ ದಿನಗಳ ಅವಧಿಯ ನೋಟೀಸನ್ನು ನೀಡಿ ಸಭೆ ನಡೆಸಬೇಕು. ಸಭೆ ನಡೆದ 3 ಕೆಲಸದ ದಿನಗಳ ಒಳಗಾಗಿ ನಡವಳಿಗಳನ್ನು ಹೊರಡಿಸಿ ಸಂಬಂಧಪಟ್ಟ ಎಲ್ಲ ಸದಸ್ಯರಿಗೆ ಕಳುಹಿಸಬೇಕು. ಅಲ್ಲದೆ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಹಾಗೂ ಜಿಲ್ಲಾ ಮಟ್ಟದ ಅಧಿಕಾರಿಗಳಿಗೆ ಮುಂದಿನ ಕ್ರಮ ಕೈಗೊಳ್ಳಲು ವರದಿ ಕಳುಹಿಸಬೇಕು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಲ್. ಷಣ್ಮುಖ**

ಪಿ.ಆರ್.1194

ಸರ್ಕಾರದ ಅಧೀನ ಕಾರ್ಯದರ್ಶಿಗಳು,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**FOREST, ECOLOGY AND ENVIRONMENT SECRETARIAT**

**ADDENDUM**

**No. FEE 127 FLL 2005 BANGALORE, DATED: 22ND AUGUST 2005**

In Government Order No. FEE 26 FLL 2003, dated: 28.10.2004 in the order portion after the words for establishing 13.75 MW "and enhanced 3.75 MW (additional 3 turbines of 1.25 MW capacity are accommodated)" shall be inserted.

By Order and in the name of the Governor of Karnataka,

**S. R. VATSALA**

PR-1195

Under Secretary to Government,

Forest, Ecology and Environment Department.